# ಸಿದ್ಧಗಂಗಾ

ಬೆಳ್ಳಿವರ್ಷ

ಸಂಪುಟ-೨೬ ಸಂಚಿಕೆ-೧ ಜನವರಿ ೧೯೯೦

ಗ್ರಾಮೀಣ ಮುಗ್ಧ ಬಂಧುಗಳಲ್ಲಿರುವ ನಿಷ್ಠೆಯಿಂದಾಗಿ ಅವರತ್ತ ಧಾವಿಸುವಂತಾಗುತ್ತದೆ. ಕೇವಲ ಕ್ಷಣಿಕವಾದ ಅನುಕೂಲಗಳಿಗೆ ನಿಷ್ಠೆಯನ್ನು ತೊರೆಯಬೇಕಾದ ಆಕರ್ಷಣೆಗಳಿಗೆ ಅವರು ಬಲಿಯಾಗುವವರಲ್ಲ. ಸುಸಂಸ್ಕೃತಿಯ ಲಕ್ಷಣವಾದ ನಿಷ್ಠೆಯನ್ನು ಬೆಳೆಸಿಕೊಳ್ಳುವುದರಿಂದ ದೇಶಕ್ಕೂ ಸಮಾಜಕ್ಕೂ ಕಲ್ಯಾಣವುಟೆಂಬುದನ್ನು ಗ್ರಾಮೀಣ ಮುಗ್ದ ಬಂಧುಗಳಿಂದ ಇಂದು ಮುಖಂಡರು, ಕಲಿತವರು ಯುವ ಜನಾಂಗ ಕಲಿಯಬೇಕಾಗಿದೆ.

**ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳು**

ಪ್ರಕಾಶಕರು:
ಹಳೆಯ ವಿದ್ಯಾರ್ಥಿಗಳ ಸಂಘ.
ಸಿದ್ಧಗಂಗಾ ಕ್ಷೇತ್ರ.

॥ ಶ್ರೀ ಗುರುಸಿದ್ಧಲಿಂಗ ಪ್ರಸನ್ನ ॥

ಅಪಾಚ್ಯಾತ್ಮ ಸ್ವರೂಪಾಯ ಶಿವಭಾವಪ್ರದಾಯಿನೇ ।

ನಮಸ್ಸದ್ಗುರುನಾಥಾಯ ಪಾ[illegible] ಬ್ರಹ್ಮಮೂರ್ತಯೇ ।

## ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿ ರಥೋತ್ಸವಾಹ್ವಾನ ಪತ್ರಿಕಾ

## ಶ್ರೀ ಸಿದ್ಧಗಂಗಾ ಕ್ಷೇತ್ರಾಧ್ಯಕ್ಷ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳ

ಸ್ವಸ್ತಿ ಶ್ರೀ ವಿಜಯಾಭ್ಯುದಯ ಶಾಲಿವಾಹನ ಶಕ ೧೯೧೧ ಕ್ಕೆ ಸರಿಯಾದ ಶ್ರೀ ಶುಕ್ಲನಾಮ ಸಂವತ್ಸ

| | | | | | |
|---|---|---|---|---|---|
| ಮಾಘ | ಬಹುಳ | ಪಂಚಮಿ | ಬುಧವಾರ | 14-2-90 | ವೃಷಭವಾಹನ |
| " | " | ಷಷ್ಠಿ | ಗುರುವಾರ | 15-2-90 | ಗಜ / ಹುಲಿವಾ |
| " | " | ಸಪ್ತಮಿ | ಶುಕ್ರವಾರ | 16-2-90 | ರುದ್ರಾಕ್ಷಿ ಮಂಟಪೋ<br>ನವರಂಗ ಪಾಲಕಿ ಉತ್ |
| " | " | ಅಷ್ಟಮಿ | ಶನಿವಾರ | 17-2-90 | ಮುತ್ತಿನಪಾಲಕಿ ಉತ್ |
| " | " | ನವಮಿ | ಭಾನುವಾರ | 18 2-90 | ಬೆಳ್ಳಿಪಾಲಕಿ ಉತ್ಸ |
| " | " | ದಶಮಿ | ಸೋಮವಾರ | 19-2-90 | ರಾವಣ/ನಂದಿವಾಹನ |
| " | " | ಏಕಾದಶಿ | ಮಂಗಳವಾರ | 20-2-90 | ಸಿಂಹ/ನವಿಲುವಾಹನ |
| " | " | ದ್ವಾದಶಿ | ಬುಧವಾರ | 21-2-90 | ಬಿಲ್ವವೃಕ್ಷವಾಹನ |
| " | " | ದ್ವಾದಶಿ | ಗುರುವಾರ | 22-2-90 | ಹುತ್ತದ/ಶೇಷವಾಹನ |
| " | " | ತ್ರಯೋದಶಿ | ಶುಕ್ರವಾರ | 23-2-90 | ಮಹಾಶಿವರಾತ್ರಿ ಪ್ರ<br>ಮುತ್ತಿನ ಪಾಲಕಿ ಉ |
| " | " | ● ಚತುರ್ದಶಿ | ಶನಿವಾರ | 24-2-90 | ರಥೋತ್ಸವ ಮ<br>ತೆಪ್ಪೋತ್ಸವ |
| " | " | ● ಅಮಾವಾಸ್ಯೆ | ಭಾನುವಾರ | 25-2-90 | ಪಂಚಬ್ರಹ್ಮೋತ್ಸವ |

ಮತ್ತು ಮಾಮೂಲಿನಂತೆ "ಚಿತ್ರಿನ ಪರಿಷೆಯೂ" ದಿನಾಂಕ 19-2-1990 ನೇ ಸೋಮ 'ದನಗಳ ಪ್ರದರ್ಶನವೂ" ಉತ್ತಮ ರಾಸುಗಳಿಗೆ ಬಹುಮಾನ ವಿನಿಯೋಗವೂ ನಡೆಯುವಂತೆ ಏ ಸಿದೆ. 'ಕೃಷಿ ಮತ್ತು ಕೈಗಾರಿಕಾ ವಸ್ತು ಪ್ರದರ್ಶನವೂ ''ಪ್ರತಿದಿವಸವೂ ಸಾಯಂಕಾಲ "ಸಾ ತಿಕ ಕಾರ್ಯಕ್ರಮಗಳೂ" ನಡೆಯುವಂತೆ ಏರ್ಪಾಡು ಮಾಡಲಾಗಿದೆ.

ಸರ್ವರೂ ಸಕಾಲದಲ್ಲಿ ಬಂದು ಉತ್ಸವಗಳಲ್ಲಿ ಭಾಗವಹಿಸಿ ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಪಾತ್ರರಾಗಬೇಕೆಂದು ಅಪೇಕ್ಷಿಸುತ್ತೇವೆ.

ಶ್ರೀ ಸಿದ್ಧಗಂಗಾ ಮಠ
ತುಮಕೂರು ಜಿಲ್ಲಾ

ಶ್ರೀ ಶಿವಕುಮಾರ ಮಹಾ ಸ್ವಾಮಿ
ಶ್ರೀ ಸಿದ್ಧಗಂಗಾ ಮಠಾಧ್ಯಕ್ಷ

ವಿ ಸೂ:- ಮಹಾ ಶಿವರಾತ್ರಿಪ್ರಯುಕ್ತ 23-2-90 ರಾತ್ರಿ-9 ಘಂಟೆಯ "ಜಗಜ್ಯೋತಿ ಬಸವೇಶ್ವರ ನಾಟಕ" ವಸ್ತು ಪ್ರದರ್ಶನದಲ್ಲಿ ಅಭಿನಯ ಲಾಗುತ್ತದೆ. ಸಹಸ್ರ ಸಹಸ್ರ ಸಂಖ್ಯೆಯಲ್ಲಿ ಬನ್ನಿರಿ.

ಸಂಚಾಲಕರು

# ಸಿದ್ಧಗಂಗಾ

ಸಂಪುಟ-೨೫ ಸಂಚಿಕೆ-೧. ಜನವರಿ-೧೯೯೦

## ಶ್ರೀ ಸಿದ್ಧಗಂಗಾ ಗುರುಕರುಣ ತ್ರಿವಿಧಿ

ಪರಿಮಳಲಿಂಗವೆ ಗುರುಲಿಂಗ ಘನಲಿಂಗ
ಕರದಿ ಮೆರೆದಿರುವಂಥ ವರಲಿಂಗ। ಪೊಡಮಡುವೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಕ್ರಿಯಲಿಂಗ ನಿಜಲಿಂಗ ನಿಷ್ಕಲ ಲಿಂಗವೆ
ಸ್ವಯಲಿಂಗ ಜ್ವಲಲಿಂಗ ಶ್ರೀ ಗುರುವೆ। ಪೊಡಮಡುವೆ
ಸಿದ್ಧಗಂಗಾ ಗುರುವೆ ಕೃಪೆಯಾಗು॥

ದೃಷ್ಟಲಿಂಗ ಗುರುವೆ ನಿತ್ಯಲಿಂಗ ಗುರುವೆ
ಇಷ್ಟಲಿಂಗವಾಡೆ ಶ್ರೀ ಗುರುವೆ। ಪೊಡಮಡುವೆ
ಸಿದ್ಧಗಂಗಾ ಗುರುವೆ ಕೃಪೆಯಾಗು॥

— ಹೆಚ್. ವಿ. ವೀರಭದ್ರಯ್ಯ

## ಶ್ರೀ ವಾಣಿ ( 19-10-1989ರ ಪ್ರಾರ್ಥನಾ ಸಭೆ )

"ಕೋಗಿಲೆಯ ಕೂಜನ ಕಿವಿಗೆಷ್ಟು ಇಂಪು ಮತ್ತು ಮಧುರ; ಕೋಗಿಲೆ ಕೂಗುತ್ತಿದ್ದರೆ ಕಿವಿದೆರೆದು ಕೇಳುತ್ತಾರೆ. ಕೋಗಿಲೆಯಿಂದ ನಮಗೆ ಬೇರಾವ ಉಪಕಾರವೂ ಇಲ್ಲ. ಅಲ್ಲದೆ ನಮ್ಮ ನಡುವೆ ಅದು ಒಡನಾಡುವುದೂ ಇಲ್ಲ. ಆದರೂ ಅದಕ್ಕೆ ಜಗತ್ತು ಬೆಲೆ ಕೊಡುತ್ತ ಬಂದಿದೆ. ಕತ್ತೆ ನಮಗೆ ಅನೇಕ ರೀತಿಯಲ್ಲಿ ಉಪಕಾರವಾಡುತ್ತದೆ. ಮೇಲಾಗಿ ಹಾದಿ ಬೀದಿಯಲ್ಲಿರುವ ಕಸಕಡ್ಡಿಯನ್ನು ತಿಂದು ನಮ್ಮ ಬದುಕಿನಲ್ಲಿ ಸಹಕರಿಸುತ್ತದೆ. ತಾಳ್ಮೆಯನ್ನು ವಹಿಸಿ ಸ್ವಲ್ಪವೂ ಬೇಸರಪಟ್ಟುಕೊಳ್ಳದೆ ದುಡಿಯುತ್ತದೆ. ಶ್ರಮಜೀವಿಯಾಗಿ ಕೆಲಸ ಮಾಡುತ್ತದೆ. "ಕತ್ತೆ ಹೊತ್ತಂತೆ ಹೊತ್ತಿರಬೇಕು ಬಾಳ ಹೊತ್ತಗೆಯ" ಎನ್ನುತ್ತದೆ ಕವಿವಾಣಿ. ಆದರೆ ಕತೆ ಬಾಯಿತೆರೆದರೆ ಕೂಗಿದರೆ ದೂರ ಸರಿಯುತ್ತಾರೆ ಕೇಳಿದವರು. ಇಲ್ಲವೆ ಬಡಿಗೆಯಿಂದ ಬಡಿದು ನಮಗೆ ಉಪಕಾರಿಯಾದ ಕತ್ತೆಯನ್ನು ದೂರಓಡಿಸುತ್ತಾರೆ. ಏಕೆ? ಅದರ ಕರ್ಕಶವಾದ ಧ್ವನಿಯನ್ನು ಕೇಳಲಾರದೆ ತಾನೆ? ಕೋಗಿಲೆಯ ಧ್ವನಿಗೆ ಕಿವಿ ಕೊಡುವುದಾದರೂ ಏಕೆ ಅದರ ಮಧುರನಾದಕ್ಕೆ ಮನಸೋತು ತಾನೆ? ಅಂದರೆ ಮಾತು ಮಧುರವಾಗಿರಬೇಕು; ಮೃದುವಾಗಿರಬೇಕು. ಭಗವಾನ್ ಬಸವಣ್ಣನವರು ಹೇಳುವಂತೆ

" ನುಡಿದರೆ ಮುತ್ತಿನ ಹಾರದಂತಿರಬೇಕು.  
ನುಡಿದರೆ ಮಾಣಿಕ್ಯದ ದೀಪ್ತಿಯಂತಿರಬೇಕು.  
ನುಡಿದರೆ ಸ್ಫಟಿಕದ ಶಲಾಕೆಯಂತಿರಬೇಕು.  
ನುಡಿದರೆ ಲಿಂಗಮೆಚ್ಚಿ ಅಹುದಹುದೆನುವಂತಿರಬೇಕು ;-

ಎಂದಿದ್ದಾರೆ ಮಾತು ಮನುಷ್ಯನನ್ನು ಪ್ರಾಣಿ ವರ್ಗದಿಂದ ಪ್ರತ್ಯೇಕಿಸುವ ಮಹಾಸಾಧನ. ಮಾತನ್ನು ಹಿರಿಯರು ಮುತ್ತಿಗೆ ಹೋಲಿಸಿದ್ದಾರೆ, ಜ್ಯೋತಿಗೆ ಹೋಲಿಸಿದ್ದಾರೆ, ದೇವರಿಗೆ ಹೋಲಿಸಿದ್ದಾರೆ, "ಮಾತೆಂಬುದು ಜ್ಯೋರ್ತಿಲಿಂಗ" ಎಂದಿದ್ದಾರೆ ಅಲ್ಲಮ ಪ್ರಭುಗಳು " ದೇವರಂಥ ಮಾತನಾಡಿದರು" ಎನ್ನುತ್ತಾರೆ ಅನುಭಾವಿಗಳು. ಮಾತು ನೈಸರ್ಗಿಕ ವಾದುದಲ್ಲ ಕಲಿತ ಕ್ರಿಯೆಯೆನ್ನುತ್ತಾರೆ ಭಾಷಾ ವಿಜ್ಞಾನಿಗಳು. ಮಾತಿನ ಜಾಡನ್ನು ಹಿಡಿದು ನಡೆದಾಗ ಅದರ ಸಮಗ್ರ ಪರಿಚಯ ವಾದೀತು! ಮಾತು ತೂಕವಾಗಿರಬೇಕು, ಮಾತಿರಬೇಕು ಮಿಂಚುಹೊಳೆದ್ಹಾಂಗೆ! ಒಳ್ಳೆಯ ಮಾತು, ಮೃದುವಾದಮಾತು ಹದವಾದ ಹೃದಯದ ಪ್ರಕಟರೂಪ, ಸುಸಂಸ್ಕೃತ ಮನಸ್ಸಿಗೆ ತೆರೆದ ಕನ್ನಡಿ. "ಅಯ್ಯಾ ಊರು ಒಳ್ಳೆಯದೆ ಎಂದರೆ ನಿನ್ನ ಬಾಯಿ-ಒಳ್ಳೆಯದೆ ಎಂದರಂತೆ." ನಮ್ಮ ಪಾಂಡಿತ್ಯ. ಪದವಿ ಪಟ್ಟ. ಅಧಿಕಾರ ಎಲ್ಲಕ್ಕೂ ಮಾತು ಮಕುಟಪ್ರಾಯವಾದದ್ದು. ನಮ್ಮಲ್ಲಿ ಒಬ್ಬ ಅಧಿಕಾರಿಗಳಿದ್ದರು ತುಂಬಾ ಶ್ರಮ ಜೀವಿಗಳು. ಸದಾಕರ್ತವ್ಯ ನಿರತರು ಪ್ರಾಮಾಣಿಕರಾಗಿ ದುಡಿಯುತ್ತಿದ್ದರು, ಕಾಲ ಹರಣಮಾಡುವವರನ್ನು ಕಂಡರೆ ತುಂಬಾ ಕೋಪಿಸಿಕೊಳ್ಳುತ್ತಿದ್ದರು, ಕೆಟ್ಟದಾಗಿ, ಒರಟಾಗಿ ಬೈಯುತ್ತಿದ್ದರು. ಅದರಿಂದಾಗಿ ಬಹು ಜನರ ವಿರೋಧ ಕಟ್ಟಿಕೊಳ್ಳುತ್ತಿದ್ದರು. ಹೃದಯ ಶುದ್ಧಿಯಿತ್ತು. ಆದರೆ ನಾಲಗೆ ತುಂಬಾ ಕಾರವಾಗಿತ್ತು ಅವರೆಲ್ಲ ಒಳ್ಳೆಯ ತನವನ್ನು ಅವರಮಾತು ಕೆಡಿಸಿ ಬಿಡುತ್ತಿತ್ತು. ಆನಂದವಾಗುವಂತೆ. ಮಾತನಾಡ ಬೇಕು ಇನ್ನೂ ಕೇಳೋಣವೆನ್ನುವಂತಿರ ಬೇಕು. ಬಾಯಿ ತೆರೆದರೆ ಸಾಕು ಎಂಬ ತವಕವನ್ನುಂಟು ಮಾಡುವಂತಿರಬೇಕು "ಬಾಯಿಬಿಟ್ಟರೆ ಬಣ್ಣಗೇಡು" ಎನಿಸಿಕೊಳ್ಳುವಂತಿರ ಬಾರದು ಅಶ್ಲೀಲ ಮಾತುಗಳನ್ನಾಡ ಬಾರದು ಅನರ್ಥಕಾರಿ ಮಾತುಗಳಿಂದೇನು ಪ್ರಯೋಜನ? ನಾವು ಬದುಕಿನಲ್ಲಿ ಇನ್ನೊಬ್ಬರಿಗೆ ಏನನ್ನು ಕೊಡಲಾರೆವಾದರೂ ಒಳ್ಳೆಯ ಮೃದು ಮಧುರವಾದ ಮಾತನ್ನಾದರೂ ಆಡಲಾರದವರಾಗಬಾರದು.

# ★ ಮಾತು ಜ್ಯೋತಿ ★

## ಅನುಭಾವದ ಸ್ವರೂಪ—೧

ಅಯ್ಯಾ, ನಿಮ್ಮ ಅನುಭಾವದಿಂದ ಎನ್ನ ತನು ಹಾಳಾಯಿತ್ತು
ಅಯ್ಯಾ, ನಿಮ್ಮ ಅನುಭಾವದಿಂದ ಎನ್ನ ಮನ ಹಾಳಾಯಿತ್ತು
ಅಯ್ಯಾ, ನಿಮ್ಮ ಅನುಭಾವದಿಂದ ಎನ್ನ ಕರ್ಮಚ್ಛೇದವಾಯಿತ್ತು
ಅಯ್ಯಾ, ನಿಮ್ಮವರು ಅಡಿಗಡಿಗೆ ಹೇಳಿ ಭಕ್ತಿ ಎಂಬೀಒಡವೆಯನು
ದಿಟಮಾಡಿ ತೋರಿದರು ಕೂಡಲಸಂಗಮದೇವಾ.

ಸಾಧಕ ಮತ್ತು ಅವನ ಸಕಲ ಸಾಧನೆಯ ಅಂತಿಮಗುರಿಯಾದ ಸಾಕ್ಷಾತ್ಕಾರ ಇವುಗಳ ನಡುವೆ ಪರ್ವತವಾಗಿ ನಿಂತಿರುವ ಎಲ್ಲ ಉಪಾದಿಗಳ ಮೊತ್ತವನ್ನು ತನು ಮತ್ತು ಮನವೆಂಬ ಮಾತುಗಳಲ್ಲಿ ಸೂಚಿಸಿದರೆ ಅದನ್ನು ಕುಟ್ಟಿ ಪುಡಿಮಾಡಬಲ್ಲ ವಜ್ರಾಯುಧ ಅನುಭಾವ. ಜೀವಿಯ ಕೋಟ್ಯಂತರ ಜನ್ಮಗಳ ಕರ್ಮ ಬಂಧನವನ್ನು ಖಡತುಂಡಮಾಡಬಲ್ಲ ಹರಿತವಾದ ಖಡ್ಗ ಅನುಭಾವ. ಹಾಗೆಯೇ ಬಸವಣ್ಣನವರ ಜೀವನ ಸಮಸ್ತಕ್ಕೂ ಸಂಕೇತಾಕ್ಷರಗಳಂತಿರುವ "ಭಕ್ತಿ" ಎಂಬುದು ಅವರಿಗೆ ಭಕ್ತರ ಕೃಪೆಯಿಂದ ಅನುಭವ ವೇದ್ಯ "ವಸ್ತು" ವಾದದ್ದು ಈ ಅನುಭಾವದಿಂದ.

## ಭಕ್ತಿಯ ಸ್ವರೂಪ—೨

"ಸಾತು ಅಸ್ಮಿನ್ ಪರಮ ಪ್ರೇಮರೂಪಾ. ಅಮೃತ ಸ್ವರೂಪಾಚ
ಯಲ್ಲಬ್ಧ್ವಾ ಪುಮಾನ್ ಸಿದ್ಧೋಭವತಿಽಮೃತೋ
ಭವತಿ ಆತ್ಮಾರಾಮೋಭವತಿ. ಯತ್ ಪ್ರಾಪ್ಯನ
ಕಿಂಚಿತ್ ವಾಂಛತಿ, ಶೋಚತಿ"

ಮಹರ್ಷಿನಾರದರ ಈ ಮಾತುಗಳಲ್ಲಿ ಭಕ್ತಿ ಎಂಬುದು ಪರಮ ಪ್ರೇಮ ರೂಪವಾದದ್ದು. ಅಮೃತ ಸ್ವರೂಪವಾದದ್ದು ಕೂಡ. ಅದು ದೊರೆತರೆ ಮನುಷ್ಯ ಸಿದ್ಧನಾಗುತ್ತಾನೆ, ಅಮೃತನಾಗುತ್ತಾನೆ, ಆತ್ಮಾರಾಮನಾಗುತ್ತಾನೆ. ಅದು ದೊರೆತ ಮೇಲೆ ಮತ್ತೆ ಪಡೆಯಬೇಕಾದದ್ದು ಯಾವುದೂ ಇರುವುದಿಲ್ಲ ಅದು ಲಭ್ಯವಾದ ಮೇಲೆ ಎಲ್ಲ ಶೋಕಕ್ಕೂ ಪೂರ್ಣವಿರಾಮ.

ಡಾ॥ ಪ್ರಭುಶಂಕರ್

ಬಸವ ಪುರುಷ- ಪುಟ 139-141

## ಶ್ರೀ ವಾಣಿ ( 19-10-1989ರ ಪ್ರಾರ್ಥನಾ ಸಭೆ )

"ಕೋಗಿಲೆಯ ಕೂಜನ ಕಿವಿಗೆಷ್ಟು ಇಂಪು ಮತ್ತು ಮಧುರ; ಕೋಗಿಲೆ ಕೂಗುತ್ತಿದ್ದರೆ ಕಿವಿದೆರೆದು ಕೇಳುತ್ತಾರೆ. ಕೋಗಿಲೆಯಿಂದ ನಮಗೆ ಬೇರಾವ ಉಪಕಾರವೂ ಇಲ್ಲ. ಅಲ್ಲದೆ ನಮ್ಮ ನಡುವೆ ಅದು ಒಡನಾಡುವುದೂ ಇಲ್ಲ. ಆದರೂ ಅದಕ್ಕೆ ಜಗತ್ತು ಬೆಲೆ ಕೊಡುತ್ತ ಬಂದಿದೆ. ಕತ್ತೆ ನಮಗೆ ಅನೇಕ ರೀತಿಯಲ್ಲಿ ಉಪಕಾರವಮಾಡುತ್ತದೆ. ಮೇಲಾಗಿ ಹಾದಿ ಬೀದಿಯಲ್ಲಿರುವ ಕಸಕಡ್ಡಿಯನ್ನು ತಿಂದು ನಮ್ಮ ಬದುಕಿನಲ್ಲಿ ಸಹಕರಿಸುತ್ತದೆ. ತಾಳ್ಮೆಯನ್ನು ವಹಿಸಿ ಸ್ವಲ್ಪವೂ ಬೇಸರಪಟ್ಟುಕೊಳ್ಳದೆ ದುಡಿಯುತ್ತದೆ. ಶ್ರಮಜೀವಿಯಾಗಿ ಕೆಲಸ ಮಾಡುತ್ತದೆ. "ಕತ್ತೆ ಹೊತ್ತಂತೆ ಹೊತ್ತಿರಬೇಕು ಬಾಳ ಹೊತ್ತಗೆಯ" ಎನ್ನುತ್ತದೆ ಕವಿವಾಣಿ. ಆದರೆ ಕತ್ತೆ ಬಾಯಿತೆರೆದರೆ ಕೂಗಿದರೆ ದೂರ ಸರಿಯುತ್ತಾರೆ ಕೇಳಿದವರು, ಇಲ್ಲವೆ ಬಡಿಗೆಯಿಂದ ಬಡಿದು ನಮಗೆ ಉಪಕಾರಿಯಾದ ಕತ್ತೆಯನ್ನು ದೂರಓಡಿಸುತ್ತಾರೆ. ಏಕೆ? ಅದರ ಕರ್ಕಶವಾದ ಧ್ವನಿಯನ್ನು ಕೇಳಲಾರದೆ ತಾನೆ? ಕೋಗಿಲೆಯ ಧ್ವನಿಗೆ ಕಿವಿ ಕೊಡುವುದಾದರೂ ಏಕೆ ಅದರ ಮಧುರನಾದಕ್ಕೆ ಮನಸೋತು ತಾನೆ? ಅಂದರೆ ಮಾತು ಮಧುರವಾಗಿರಬೇಕು; ಮೃದುವಾಗಿರಬೇಕು. ಭಗವಾನ್ ಬಸವಣ್ಣನವರು ಹೇಳುವಂತೆ

" ನುಡಿದರೆ ಮುತ್ತಿನ ಹಾರದಂತಿರಬೇಕು.
ನುಡಿದರೆ ಮಾಣಿಕ್ಯದ ದೀಪ್ತಿಯಂತಿರಬೇಕು.
ನುಡಿದರೆ ಸ್ಫಟಿಕದ ಶಲಾಕೆಯಂತಿರಬೇಕು.
ನುಡಿದರೆ ಲಿಂಗಮೆಚ್ಚಿ ಅಹುದಹುದೆನುವಂತಿರಬೇಕು ;-

ಎಂದಿದ್ದಾರೆ ಮಾತು ಮನುಷ್ಯನನ್ನು ಪ್ರಾಣಿ ವರ್ಗದಿಂದ ಪ್ರತ್ಯೇಕಿಸುವ ಮಹಾಸಾಧನ. ಮಾತನ್ನು ಹಿರಿಯರು ಮುತ್ತಿಗೆ ಹೋಲಿಸಿದ್ದಾರೆ, ಜ್ಯೋತಿಗೆ ಹೋಲಿಸಿದ್ದಾರೆ, ದೇವರಿಗೆ ಹೋಲಿಸಿದ್ದಾರೆ, " ಮಾತೆಂಬುದು ಜ್ಯೋತಿರ್ಲಿಂಗ " ಎಂದಿದ್ದಾರೆ ಅಲ್ಲಮ ಪ್ರಭುಗಳು " ದೇವರಂಥ ಮಾತನಾಡಿದರು". ಎನ್ನುತ್ತಾರೆ ಅನುಭಾವಿಗಳು. ಮಾತು ನೈಸರ್ಗಿಕ ವಾದುದಲ್ಲ ಕಲಿತ ಕ್ರಿಯೆಯೆನ್ನುತ್ತಾರೆ ಭಾಷಾ ವಿಜ್ಞಾನಿಗಳು. ಮಾತಿನ ಜಾಡನ್ನು ಹಿಡಿದು ನಡೆದಾಗ ಅದರ ಸಮಗ್ರ ಪರಿಚಯ ವಾದೀತು! ಮಾತು ತೂಕವಾಗಿರಬೇಕು, ಮಾತಿರಬೇಕು ಮಿಂಚುಹೊಳೆದ್ಹಾಂಗೆ ! ಒಳ್ಳೆಯ ಮಾತು, ಮೃದುವಾದಮಾತು ಹದವಾದ ಹೃದಯದ ಪ್ರಕಟರೂಪ, ಸುಸಂಸ್ಕೃತ ಮನಸ್ಸಿಗೆ ತೆರೆದ ಕನ್ನಡಿ. "ಅಯ್ಯಾ ಊರು ಒಳ್ಳೆಯದೆ ಎಂದರೆ ನಿನ್ನ ಬಾಯಿ ಒಳ್ಳೆಯದೆ ಎಂದರಂತೆ." ನಮ್ಮ ಪಾಂಡಿತ್ಯ. ಪದವಿ ಪಟ್ಟ. ಅಧಿಕಾರ ಎಲ್ಲಕ್ಕೂ ಮಾತು ಮಕುಟಪ್ರಾಯವಾದದ್ದು. ನಮ್ಮಲ್ಲಿ ಒಬ್ಬ ಅಧಿಕಾರಿಗಳಿದ್ದರು ತುಂಬಾ ಶ್ರಮ ಜೀವಿಗಳು. ಸದಾಕರ್ತವ್ಯ ನಿರತರು ಪ್ರಾಮಾಣಿಕರಾಗಿ ದುಡಿಯುತ್ತಿದ್ದರು, ಕಾಲ ಹರಣಮಾಡುವವರನ್ನು ಕಂಡರೆ ತುಂಬಾ ಕೋಪಿಸಿಕೊಳ್ಳುತ್ತಿದ್ದರು, ಕೆಟ್ಟದಾಗಿ, ಒರಟಾಗಿ ಬೈಯುತ್ತಿದ್ದರು. ಅದರಿಂದಾಗಿ ಬಹು ಜನರ ವಿರೋಧ ಕಟ್ಟಿಕೊಳ್ಳುತ್ತಿದ್ದರು. ಹೃದಯ ಶುದ್ಧಿಯಿತ್ತು. ಆದರೆ ನಾಲಗೆ ತುಂಬಾ ಕಾರವಾಗಿತ್ತು ಅವರೆಲ್ಲ ಒಳ್ಳೆಯ ತನವನ್ನು ಅವರಮಾತು ಕೆಡಿಸಿ ಬಿಡುತ್ತಿತ್ತು. ಆನಂದವಾಗುವಂತೆ, ಮಾತನಾಡ ಬೇಕು ಇನ್ನೂ ಕೇಳೋಣವೆನ್ನುವಂತಿರ ಬೇಕು. ಬಾಯಿ ತೆರೆದರೆ ಸಾಕು ಎಂಬ ತವಕವನ್ನುಂಟು ಮಾಡುವಂತಿರಬೇಕು "ಬಾಯಿಬಿಟ್ಟರೆ ಬಣ್ಣಗೇಡು" ಎನಿಸಿಕೊಳ್ಳುವಂತಿರ ಬಾರದು. ಅಶ್ಲೀಲ ಮಾತುಗಳನ್ನಾಡ ಬಾರದು ಅನರ್ಥಕಾರಿ ಮಾತುಗಳಿಂದೇನು ಪ್ರಯೋಜನ ? ನಾವು ಬದುಕಿನಲ್ಲಿ ಇನ್ನೊಬ್ಬರಿಗೆ ಏನನ್ನು ಕೊಡಲಾರೆವಾದರೂ ಒಳ್ಳೆಯ ಮೃದು ಮಧುರವಾದ ಮಾತನ್ನಾದರೂ ಆಡಲಾರದವರಾಗಬಾರದು.

## ★ ಮಾತು ಜ್ಯೋತಿ ★

### ಅನುಭಾವದ ಸ್ವರೂಪ—೧

ಅಯ್ಯಾ, ನಿಮ್ಮ ಅನುಭಾವದಿಂದ ಎನ್ನ ತನು ಹಾಳಾಯಿತ್ತು
ಅಯ್ಯಾ, ನಿಮ್ಮ ಅನುಭಾವದಿಂದ ಎನ್ನ ಮನ ಹಾಳಾಯಿತ್ತು
ಅಯ್ಯಾ, ನಿಮ್ಮ ಅನುಭಾವದಿಂದ ಎನ್ನ ಕರ್ಮಚ್ಛೇದವಾಯಿತ್ತು
ಅಯ್ಯಾ, ನಿಮ್ಮವರು ಅಡಿಗಡಿಗೆ ಹೇಳಿ ಭಕ್ತಿ ಎಂಬೀಬಡವೆಯನು
ದಿಟಮಾಡಿ ತೋರಿದರು ಕೂಡಲಸಂಗಮದೇವಾ.

ಸಾಧಕ ಮತ್ತು ಅವನ ಸಕಲ ಸಾಧನೆಯ ಅಂತಿಮಗುರಿಯಾದ ಸಾಕ್ಷಾತ್ಕಾರ ಇವುಗಳ ನಡುವೆ ಪರ್ವತವಾಗಿ ನಿಂತಿರುವ ಎಲ್ಲ ಉಪಾದಿಗಳ ಮೊತ್ತವನ್ನು ತನು ಮತ್ತು ಮನವೆಂಬ ಮಾತುಗಳಲ್ಲಿ ಸೂಚಿಸಿದರೆ ಅದನ್ನು ಕುಟ್ಟಿ ಪುಡಿಮಾಡಬಲ್ಲ ವಜ್ರಾಯುಧ ಅನುಭಾವ. ಜೀವಿಯ ಕೋಟ್ಯಂತರ ಜನ್ಮಗಳ ಕರ್ಮ ಬಂಧನವನ್ನು ಖಡತುಂಡಮಾಡಬಲ್ಲ ಹರಿತವಾದ ಖಡ್ಗ ಅನುಭಾವ. ಹಾಗೆಯೇ ಬಸವಣ್ಣನವರ ಜೀವನ ಸಮಸ್ತಕ್ಕೂ ಸಂಕೇತಾಕ್ಷರಗಳಂತಿರುವ "ಭಕ್ತಿ" ಎಂಬುದು ಅವರಿಗೆ ಭಕ್ತರ ಕೃಪೆಯಿಂದ ಅನುಭವ ವೇದ್ಯ "ವಸ್ತು" ವಾದದ್ದು ಈ ಅನುಭಾವದಿಂದ.

### ಭಕ್ತಿಯ ಸ್ವರೂಪ—೨

"ಸಾತು ಅಸ್ಮಿನ್ ಪರಮ ಪ್ರೇಮರೂಪಾ. ಅಮೃತ ಸ್ವರೂಪಾಚ
ಯಲ್ಲಬ್ಧ್ವಾ ಪುಮಾನ್ ಸಿದ್ಧೋಭವತಿಽಮೃತೋ
ಭವತಿ ಆತ್ಮಾರಾಮೋಭವತಿ ಯತ್ ಪ್ರಾಪ್ಯನ
ಕಿಂಚಿತ್ ವಾಂಛತಿ, ಶೋಚತಿ"

ಮಹರ್ಷಿನಾರದರ ಈ ಮಾತುಗಳಲ್ಲಿ ಭಕ್ತಿ ಎಂಬುದು ಪರಮ ಪ್ರೇಮ ರೂಪವಾದದ್ದು. ಅಮೃತ ಸ್ವರೂಪವಾದದ್ದು ಕೂಡ. ಅದು ದೊರೆತರೆ ಮನುಷ್ಯ ಸಿದ್ಧನಾಗುತ್ತಾನೆ, ಅಮೃತನಾಗುತ್ತಾನೆ, ಆತ್ಮಾರಾಮನಾಗುತ್ತಾನೆ. ಅದು ದೊರೆತ ಮೇಲೆ ಮತ್ತೆ ಪಡೆಯಬೇಕಾದದ್ದು ಯಾವುದೂ ಇರುವುದಿಲ್ಲ ಅದು ಲಭ್ಯವಾದ ಮೇಲೆ ಎಲ್ಲ ಶೋಕಕ್ಕೂ ಪೂರ್ಣವಿರಾಮ.

ಡಾ॥ ಪ್ರಭುಶಂಕರ್
ಬಸವ ಪುರುಷ- ಪುಟ 139-141

## ಶ್ರೀ ಸಿದ್ಧಲಿಂಗೇಶ್ವರ ವಚನ



**ತಂದೆಯು ವಧುವ ತಂದು, ಮಗನಿಗೆ ಮದುವೆಯ ಮಾಡಿದೆ;**
**ಮಗನ ಹೆಂಡತಿಯ ತಂದು, ಅವರಪ್ಪಗೆ ಮದುವೆ ಮಾಡಿದೆ;**
**ಆದಿ ಪಿಂಡವೆ ಜೀವಪಿಂಡ**
**ಅತ್ತೆ ಸೊಸೆಯು ನೆರೆದಳು;**
**ತಂದೆ ಮಕ್ಕಳಿಬ್ಬರು ಪರಾಂಗನೆಯು ನೆರೆದು;**
**ಪರಾಪರ ವಸ್ತುವಾದುದ ನೇನೆಂಬೆನಯ್ಯ**
**ಮಹಾಲಿಂಗ ಗುರು ಶಿವಸಿದ್ದೇಶ್ವರ ಪ್ರಭುವೇ;**

ಇದೊಂದು ಬೆಡಗಿನ ವಚನ. ಗುರು ತಂದೆಗೆ ಸಮಾನನಾದವನು. ಶಿಷ್ಯ ಮಗನಿದ್ದಂತೆ. ತಂದೆ ತನ್ನ ದುಡಿಮೆಯನ್ನೆಲ್ಲ ಮಗನಿಗೆ ಬಿಟ್ಟು ಕೊಡುವಂತೆ, ತನ್ನ ಆಸ್ತಿಪಾಸ್ತಿಗೆ ಹಕ್ಕುದಾರನನ್ನಾಗಿ ಮಾಡುವಂತೆ. ಶ್ರೀ ಗುರುವು ತನ್ನ ಜ್ಞಾನ ಮತ್ತು ಆಸಂಬಂಧವಾದ ಆಚರಣೆಯನ್ನು ಶಿಷ್ಯನಾದವನಿಗೆ ಉಪದೇಶಿಸುವುದರ ಮೂಲಕ ಬಿಟ್ಟುಕೊಡುತ್ತಾನೆ. ಇದು ತಂದೆಯು ವಧುವತಂದು ಮಗನಿಗೆ ಮದುವೆ ಮಾಡಿದೆ ಎಂಬುದಕ್ಕೆ ಅರ್ಥ. ಮಗನಾದವನು ತನ್ನ ಕ್ರಿಯಾಚರಣೆಯ ಮೂಲಕ ತಂದೆಗೆ ಅರ್ಪಿತನಾಗುವಂತೆ ಶಿಷ್ಯನಾದವನು ಶ್ರೀಗುರುವಿಗೆ ತನ್ನ ಸತ್ ಕ್ರಿಯೆಯ ಆಚರಣೆಗಳನ್ನೆಲ್ಲ ಅರ್ಪಿಸುವುದು ಮಗನಹೆಂಡತಿಯ ತಂದು ಅವರಪ್ಪಗೆ ಮದುವೆಯ ಮಾಡಿದೆ ನೆಂಬುದಕ್ಕೆ ಅರ್ಥ. ಅತ್ತೆ ಸೊಸೆಯರ ಸಾಮರಸ್ಯ ಸಂಸಾರದ ಸಂತೋಷಕ್ಕೆ ಕಾರಣ. ಹಾಗೆಯೇ ಜ್ಞಾನರೂಪಿಯಾದಗುರು ಕ್ರಿಯರೂಪಿಯಾದ ಶಿಷ್ಯರಿಬ್ಬರೂ ಸಮರಸವಾಗಿ ಲಿಂಗಸಾಮರಸ್ಯದಲ್ಲಿ ಏಕತ್ವವನ್ನೈದುವುದು ಅತ್ತೆಸೊಸೆಯನ್ನು ನೆರೆದಳೆಂಬುದನ್ನುತಿಳಿಯಬೇಕು. ಸತ್‌ಕ್ರಿಯೆ ಮತ್ತು ಸಮ್ಯಕ್‌ಜ್ಞಾನಗಳು ಪರಿಪೂರ್ಣವಾದ ಪರಾಶಕ್ತಿಯೊಡನೆ ಬೆರೆತು ಪರಾಪರವಸ್ತು ಸ್ವರೂಪರಾಗಿ ವಿರಾಜಿಸುವುದನ್ನು ಹೋಲಿಸುವುದಕ್ಕೆ ಬರದು ಎಂಬುದು ತಂದೆ ಮಕ್ಕಳಿಬ್ಬರೂ ಪರಾಂಗನೆಯ ನೆರೆದು ಪರಾಪರವಸ್ತುವಾದುದನೇನೆಂಬೆ ನೆಂಬುದಕ್ಕೆ ಅರ್ಥ.

## ಸಂಪಾದಕೀಯ

### ಇಪ್ಪತ್ತೈದು ವರ್ಷ

'ಸಿದ್ಧಗಂಗಾ'ಕ್ಕೆ ಇಪ್ಪತ್ತೈದು ತುಂಬಿತು. ಕಾಲು ಶತಮಾನದಲ್ಲಿ ಪತ್ರಿಕೆ ನಡೆದುಬಂದಿದೆ; ನಿಲ್ಲದೆನಡೆದುಬಂದಿದೆ. ಒಂದು ಪತ್ರಿಕೆಯನ್ನು ಪ್ರಾರಂಭಿಸುವುದು ದೊಡ್ಡದಲ್ಲ. ಅದನ್ನು ನಡೆಸಿಕೊಂಡು ಬರುವುದು ಮಹತ್ವದ ಕೆಲಸ. ಪತ್ರಿಕಾರಂಗದಲ್ಲಿ ದುಡಿಯುತ್ತಿರುವುವವರಿಗೆಲ್ಲ ಇದು ಗೊತ್ತಿರುವ ಸಂಗತಿ. ಪತ್ರಿಕೆಯ ಹಿಂದೆ ಹತ್ತಾರು ರೂಪದಲ್ಲಿ ದುಡಿಯುವ 'ಮನಸ್ಸು'ಗಳ ನಿಷ್ಠೆಯನ್ನು, ಸಂಕಲ್ಪ-ವನ್ನು ಸ್ಮರಿಸಬೇಕಾದುದು ಕರ್ತವ್ಯ. ಪತ್ರಿಕೆಗೆ ಬೇಕಾದ ಬಂಡವಾಳ, ಲೇಖನ-ಸಂಪತ್ತು, ಮುದ್ರಣಸೌಲಭ್ಯ, ಜಾಹಿರಾತುದಾರರ ಪ್ರೋತ್ಸಾಹ ಆಜೀವಸದಸ್ಯರ ಶಕ್ತಿದಾನ, ಚಂದಾದಾರರ ಬೆಂಬಲ, ಸಲಹಾತಜ್ಞರ ಸಮಯೋಚಿತ ಸೂಚನೆಗಳು, ಸಂಪಾದಕ ಮಂಡಳಿಯ ಸಕ್ರಿಯ ಸಹಕಾರ, ಓದುಗರ ನಿರಂತರ ಬೇಡಿಕೆ ಎಲ್ಲವೂ ಅಗತ್ಯಕೂಡಿಬರಬೇಕು. 'ಸಿದ್ಧಗಂಗಾ' ಕ್ಕೆ ಈ ಎಲ್ಲ ನೆರವೂ ಒದಗಿ ಬಂದುದನ್ನು ತುಂಬು ಹೃದಯದಿಂದ ಕೃತಜ್ಞಾತಾಪೂರ್ವಕವಾಗಿ ಸ್ಮರಿಸುತ್ತದೆ. ಪೂಜ್ಯ ಶ್ರೀ ಶ್ರೀ-ಗಳವರ ಶ್ರೀ ರಕ್ಷೆ 'ಸಿದ್ಧಗಂಗಾ' ಪತ್ರಿಕೆಗೆ ಪ್ರಾಣವಾಯು. ಹಳೆಯ ವಿದ್ಯಾರ್ಥಿಗಳು ಬೆನ್ನೆಲುಬು.

ಕಳೆದ ಇಪ್ಪತ್ತೈದು ವರ್ಷಗಳಲ್ಲಿ ಪತ್ರಿಕೆ ನಿರಂತರವಾಗಿ ಪ್ರಕಟವಾಗಲು ಸಂಪಾದಕರಾಗಿ ಸೇವೆಸಲ್ಲಿಸಿದವರು ಹಲವರು. ಅವರೆಲ್ಲ ಒಂದು ಪೈಸೆ ಸಂಭಾವನೆ-ಯನ್ನು ತೆಗೆದುಕೊಳ್ಳದೆ ಪತ್ರಿಕೆಗಾಗಿ ದುಡಿದಿದ್ದಾರೆ. ಅಂತೆಯೇ ಶ್ರೀ ಮಠದ ಮೇಲೆ ಅಭಿಮಾನ ವಿಟ್ಟುಕೊಂಡಿರುವ, ಪೂಜ್ಯ ಶ್ರೀ ಶ್ರೀ ಗಳವರಲ್ಲಿ ಭಕ್ತಿ ಶ್ರದ್ಧೆಗಳನ್ನು ಇಟ್ಟಿರುವ ಲೇಖಕರು ಪ್ರತಿಫಲ ನಿರೀಕ್ಷಿಸದೆ ಸಹಕರಿಸುತ್ತ ಬಂದಿದ್ದಾರೆ. ಪ್ರಕಾಶನದ ಕಾರ್ಯಕ್ಷಮತ್ವವನ್ನು |ಸಮಯೋಚಿತವಾಗಿ ನಿರ್ವಹಿಸುತ್ತ ಬಂದಿದ್ದಾರೆ ಆ ಭಾಗದ ಪದಾಧಿಕಾರಿಗಳು. ನಿಸ್ವಾರ್ಥವಾಗಿ ದುಡಿಯುತ್ತಿರುವ ಮನಸ್ಸುಗಳು ಒಂದೆರಡಿವೆ ಹಿನ್ನೆಲೆಯಲ್ಲಿ. ಹಳೆಯ ವಿದ್ಯಾರ್ಥಿಸಂಘದ ಹೆಮ್ಮೆಯ ಪ್ರಕಟಣೆಯಾದ 'ಸಿದ್ಧಗಂಗಾ' ಬೆಳ್ಳಿ ಹಬ್ಬವನ್ನಾಚರಿಸುವ ಪದ್ಧತಿ ನಡೆಸಿದೆ. ಕರ್ನಾಟಕ ಪತ್ರಿಕೋದ್ಯಮ ಅಕಾಡೆಮಿ ಈವರ್ಷ ಪ್ರಶಸ್ತಿ ನೀಡಿ ಪುರಸ್ಕರಿಸಿದೆ.

ಪತ್ರಿಕೆ ಇನ್ನೂ ಸುಂದರವಾಗಿ, ಅಚ್ಚುಕಟ್ಟಾಗಿ ನಿಯತವಾಗಿ ಪ್ರಕಟವಾಗ-ಬೇಕು ಎಂದೇ ಎಲ್ಲ ಹಳೆಯ ವಿದ್ಯಾರ್ಥಿಗಳ ಕಳಕಳಿ. ಆಸಂಬಂಧವಾಗಿ ಚರ್ಚೆ, ಸಮಾಲೋಚನೆಗಳೂ ಮೇಲಿಂದ ಮೇಲೆ ನಡೆಯುತ್ತಲೇ ಬಂದಿವೆ. ಇದು ತುಂಬಾ ಆಶಾದಾಯಕವಾದ ಪ್ರವೃತ್ತಿಯಲ್ಲವೆ? ಆದರೆ ಪತ್ರಿಕೆ ಬರೀ ಮಾತುಗಳಿಂದ ಬೆಳೆಯಬಹುದೆ? ಚರ್ಚೆಗಳಿಂದ ಮೈತುಂಬಿ ಹೊರ ಹೊಮ್ಮುತ್ತದೆಯೆ? ಅದಕ್ಕೆ ಬೇಕಾಗಿರುವ ಜೀವಧಾತು ಆರ್ಥಿಕ ಭದ್ರತೆ. ಎಲ್ಲದಕ್ಕೂ ಪೂಜ್ಯ ಶ್ರೀ ಶ್ರೀಗಳವರನ್ನೇ

ನೋಡುವುದು ಎಷ್ಟು ಸಮಂಜಸ ? ಸಹಸ್ರಾರು ಹಳೆಯ ವಿದ್ಯಾರ್ಥಿಗಳಿರುವ ಸಂಘಕ್ಕೆ ಪತ್ರಿಕೆಗೆ ಆರ್ಥಿಕ ಭದ್ರತೆಯನ್ನೊದಗಿಸುವುದು ಕಷ್ಟವಾಗಲಾರದು, ಕಷ್ಟವಾಗಬಾರದು ಕೇವಲ ಇಪ್ಪತ್ತು ರೂಪಾಯಿ ಕೊಟ್ಟು ವಾರ್ಷಿಕ ಚಂದಾದಾರರಾಗದಿರುವ ಸಹಸ್ರಾರು ಹಳೆಯ ವಿದ್ಯಾರ್ಥಿಗಳು ಇತ್ತ ಯೋಚಿಸಬಾರದೆ? **ಮಠನಮಗೇನು ಮಾಡಿದೆ ಎಂಬುದಕ್ಕಿಂತ ಮಠಕ್ಕೆ ನಾವೇನು ಮಾಡಿದೆವು** ಎಂದು ಕ್ಷಣ ಕಾಲ ಚಿಂತಿಸೋಣ. ಪತ್ರಿಕೆ ಮಠದ ಮುಖ ವಾಣಿಯಾಗಬೇಕಲ್ಲವೆ? ಶ್ರೀ ಮಠದ ಎಂಬತ್ತೈದು ಶಿಕ್ಷಣ ಸಂಸ್ಥೆಗಳಲ್ಲಿರುವ ಉದ್ಯೋಗಿಗಳೆಷ್ಟು ? ಒಬ್ಬೊಬ್ಬರೂ ಚಂದಾದಾರರಾಗಬಾರದೇಕೆ? ಚಂದಾದಾರರಾಗಿರೆಂದು ಕೇಳಬೇಕೆ ? ಶ್ರೀ ಸಂಸ್ಥೆಯ ಆಶ್ರಯ ಪಡೆದುಕೊಂಡಿರುವ ನಾವು ಇದನ್ನೆಲ್ಲ ಯೋಚಿಸಬೇಡವೇ? ಪತ್ರಿಕೆಯ ಗುಣ-ದೋಷಗಳನ್ನು ವಿಮರ್ಶೆಮಾಡುವ ಮೊದಲು ಅದಕ್ಕಾಗಿ ನಾವು ಮಾಡಿರುವುದೇನು? ಎಂದು ನಮಗೆ ನಾವೆ ಕೇಳಿಕೊಳ್ಳಬೇಡವೆ? ಮಾತೆತ್ತಿದರೆ "ಆ ಪತ್ರಿಕೆ ಹಾಗೆ ಬರುತ್ತಿದೆ, ಈ ಪತ್ರಿಕೆ ನೋಡಿ ಹೇಗಿದೆ? ಅರ್ಪಣಾ ಮನೋಭಾವದ ವ್ಯಕ್ತಿಗಳು ಬೇಕು ಇದಕ್ಕೆಲ್ಲ"-ಎನ್ನುವ ಬಂಧುಗಳು ಒಬ್ಬ ಆಜೀವ ಸದಸ್ಯನನ್ನು ಪತ್ರಿಕೆಗೆ ತಂದು ಕೊಟ್ಟರೆಷ್ಟು ಒಳ್ಳೆಯದು ? ಹೋಗಲಿ ಒಬ್ಬ ವಾರ್ಷಿಕ ಚಂದಾದಾರನನ್ನಾದರೂ ಮಾಡಿಕೊಡುವ ಸಹಕಾರ ನೀಡಿದರೆ ಎಂಥ ಉಪಕಾರವಾದೀತು! ನೂರು ಮಾತುಗಳಿಗಿಂತ ಒಂದು ಕೃತಿ ಶ್ರೇಷ್ಠವಲ್ಲವೆ? ಹಾಗಾದೀತೆ ಮುಂದಾದರೂ. ಪೂಜ್ಯ ಶ್ರೀ ಶ್ರೀ ಗಳವರ ಬಹುಮುಖ ಸೇವಾ ಜೀವನದ ಕೈಗನ್ನಡಿ **ಪತ್ರಿಕೆ**ಯಾಗುವಂತೆ, ವಿಚಾರಪೂರ್ಣ ಸಂಪುಟಗಳಾಗುವಂತೆ, ದೇಶ ಕಾಲಗಳ ಧರ್ಮಕ್ಕನುಗುಣವಾಗಿ ಅರಳುವಹಾಗೆ ಮುನ್ನಡೆಯಲು ಸಂಬಂಧಿಸಿದ ಎಲ್ಲರ ಸಹಕಾರ ಒದಗಿ ಬರಲಿ ಎಂದು ನಿರೀಕ್ಷಿಸೋಣವೆ? ಹಳೆಯ ವಿದ್ಯಾರ್ಥಿಗಳು, ಶ್ರೀ ಮಠದ ಆಶ್ರಯದಲ್ಲಿ ನಡೆದಿರುವ ಶಿಕ್ಷಣ ಸಂಸ್ಥೆಗಳ ಉದ್ಯೋಗಿ ಬಂಧು ಭಗಿನಿಯರು ಈಗಲಾದರೂ ಸ್ನೇಹ ಸಹಕಾರ ನೀಡುವರೆಂದು "ಸಿದ್ಧಗಂಗಾ" ಆಶಿಸುತ್ತದೆ.

ಸಹಕಾರ ನೀಡುತ್ತ ಬಂದಿರುವ ಸಮಸ್ತ ಸಹೃದಯಿಗಳಿಗೂ ಮತ್ತೊಮ್ಮೆ ವಂದನೆಗಳನ್ನು ಸಲ್ಲಿಸುತ್ತದೆ " ಸಿದ್ಧಗಂಗಾ "



## ಅಭಿನಂದನೆ.

ಕನ್ನಡ ಸಾರಸ್ವತ ಲೋಕದ ವಿದ್ವಾಂಸರೂ, ವಚನ ಸಾಹಿತ್ಯ ವಿಶಾರದರೂ, ಸುಪ್ರಸಿದ್ಧ ಪ್ರಾಧ್ಯಾಪಕರೂ, ಕರ್ನಾಟಕ ವಿಶ್ವ ವಿದ್ಯಾಲಯದ ನಿವೃತ್ತ ಕುಲಪತಿಗಳು ಅಖಿಲ ಭಾರತ ಶರಣ ಸಾಹಿತ್ಯ ದ್ವಿತೀಯ ಸಮ್ಮೇಳನದ ಅಧ್ಯಕ್ಷರು ಆದ ಸನ್ಮಾನ್ಯ ಡಾ। ಆರ್. ಸಿ. ಹಿರೇಮಠರು ಅಖಿಲ ಭಾರತ ಕನ್ನಡ ಸಾಹಿತ್ಯ 59 ನೆ ಸಮ್ಮೇಳನದ ಅಧ್ಯಕ್ಷರಾಗಿ ಆಯ್ಕೆಯಾದುದನ್ನು ತುಂಬು ಹೃದಯದಿಂದ ಸ್ವಾಗತಿಸುತ್ತ ಅಭಿನಂದನೆಗಳನ್ನು ಸಲ್ಲಿಸಲು "ಸಿದ್ಧಗಂಗಾ" ಸಂತೋಷಿಸುತ್ತದೆ.

---

## ವಿವೇಕಾನಂದ ವಾಣಿ

ನಿಮ್ಮ ಮುಕ್ತಿಯೊಂದನ್ನೇ ನೀವು ಬಯಸಿದರೆ ನರಕಕ್ಕೆ ಹೋಗುತ್ತೀರಿ! ಅತ್ಯುತ್ತಮ ಸ್ಥಿತಿಗೆ ಬರಬೇಕಾದರೆ ಇತರರ ಮುಕ್ತಿಯನ್ನು ಬಯಸಿ ಸ್ವಂತ ಮುಕ್ತಿಯ ಬಯಕೆಯನ್ನು ತೊಡೆದು ಹಾಕಿ. ಇದೇ ಅತಿದೊಡ್ಡ ಆಧ್ಯಾತ್ಮಸಾಧನೆ. ಕೆಲಸ-ಮಾಡಿ, ಮಕ್ಕಳೆ ಹೃತ್ಪೂರ್ವಕವಾಗಿ ಕೆಲಸಮಾಡಿ ಕೆಲಸದ ಫಲದ ಬಗ್ಗೆ ಯೋಚನೆ ಬೇಡಿ ಪರರಿಗಾಗಿ ದುಡಿಯುತ್ತಾ ನೀವು ನರಕಕ್ಕೆ ಹೋದರೆ ತಾನೆ ಏನು ? ನಿಮ್ಮ ಮುಕ್ತಿಯಿಂದ ಸ್ವರ್ಗಕೆ ಹೋಗುವುದಕ್ಕಿಂತ ಅದು ಉತ್ತಮ... ಶ್ರೀ ರಾಮಕೃಷ್ಣರು ಜಗತ್ತಿಗೆ ಬಂದು ಅದಕ್ಕಾಗಿ ತಮ್ಮ ಇಡೀ ಜೀವನವನ್ನೇ ತೆತ್ತರು. ನಾನು ನನ್ನ ಜೀವನವನ್ನು ಬಲಿಕೊಡುತ್ತೇನೆ ನೀವು ನಿಮ್ಮಲ್ಲಿ ಒಬ್ಬೊಬ್ಬರು ಅದೇ ಕೆಲಸ ಮಾಡಬೇಕು. ಈ ಕೆಲಸ ಇತ್ಯಾದಿ ಪ್ರಾರಂಭಕ್ಕೆ ಮಾತ್ರ. ನಂಬಿ ನಮ್ಮ ಎದೆಯಮೇಲೆ ರಕ್ತವನ್ನು ಬಸಿಯುವುದರಿಂದ ಮಹಾಶೂರ ಕೆಲಸಗಾರರು ಜಗತ್ತನ್ನೇ ಕ್ರಾಂತಿಗೊಳಿಸಬಲ್ಲ ಭಗವಂತನ ಯೋಧರು ಹುಟ್ಟಿಕೊಳ್ಳುತ್ತಾರೆ

ಡಾ॥ ಪ್ರಭುಶಂಕರ ಅವರ ಸ್ವಾಮಿ ವಿವೇಕನಂದ
ಗ್ರಂಥದಿಂದ – ಪುಟ 113

ಶ್ರೀ ಮಠದ ಪರಮಪೂಜ್ಯ ಶ್ರೀ ಶ್ರೀ ಗಳವರ ನಿತ್ಯ ಸಂದೇಶವೂ ಇದೇ ಆಗಿದೆ.

–ಸಂ

# ಕಂಚುಕಲ್ ಬಂಡೆಮಠ ಮತ್ತು ಶ್ರೀ ಶಿವರುದ್ರಸ್ವಾಮಿಗಳ ಕಾರ್ಯಸಾಧನೆ

—ಜಿ. ವಿ. ಶಿವಸ್ವಾಮಿ, ಎಂ.ಎ., ಬಿ.ಇಡಿ., ನಂ. 2306, 3ನೇ 'ಬಿ' ಮುಖ್ಯರಸ್ತೆ,
ವಿಜಯನಗರ 2ನೇ ಹಂತ, ಬೆಂಗಳೂರು–560040

ಕರ್ನಾಟಕವು ಪವಿತ್ರವಾದಪುಣ್ಯಭೂಮಿ, ಈ ಭೂಮಿಯ ಮಣ್ಣಿನ ಕಣ-ಕಣವೂ ಪಾವನವಾದದ್ದು. ಇಲ್ಲಿ ಜನ್ಮತಾಳಿದ ಅನೇಕ ಋಷಿಗಳು, ಆಚಾರ್ಯರು, ಸಾಧು-ಸಂತರು, ಶರಣರು ಈ ನಾಡಿನಲ್ಲಿ ಸಂಚರಿಸಿ ಅವರು ನಿಂತು ಕುಳಿತು ತಪಸ್ಸು ಮಾಡಿದ ಸ್ಥಳಗಳು ಪವಿತ್ರ ಧರ್ಮಕ್ಷೇತ್ರಗಳಾಗಿವೆ. ಒಂದೊಂದು ಕ್ಷೇತ್ರವೂ ಮಾನವರನ್ನು ಉದ್ಧಾರ ಮಾಡುವ ಮುಕ್ತಿಮಂದಿರಗಳಾಗಿವೆ. ಕಂಚುಕಲ್ ಬಂಡೆಮಠ ಶರಣರ ಸಂಪ್ರದಾಯದ ಒಂದು ವೀರಶೈವ ಮಠ.

ಕಂಚುಕಲ್ ಬಂಡೆಮಠವು ಬೆಂಗಳೂರು ಜಿಲ್ಲಾ, ಮಾಗಡಿ ತಾಲ್ಲೂಕಿಗೆ ಸೇರಿದೆ. ಸಿದ್ಧಗಂಗಾ, ಶಿವಗಂಗಾ, ಹುತ್ರಿದುರ್ಗ, ಸಾವನದುರ್ಗ, ಮಹಂತೇಶ್ವರ ಗದ್ದುಗೆ, ದೇವರ ಹೊಸಹಳ್ಳಿ ಮುಂತಾದ ಪವಿತ್ರಕ್ಷೇತ್ರಗಳ ಮಧ್ಯದಲ್ಲಿ ಅರ್ಕಾವತಿ ನದಿಯ ತಪ್ಪಲು ಪ್ರದೇಶದ ಗಿಡಮರ, ಬೆಟ್ಟಗಳ ಪ್ರಕೃತಿ ಸೌಂದರ್ಯದಿಂದ ಕೂಡಿ ವಿರಾಜಿಸುತ್ತಿದೆ. ಈ ಮಠವ ಅನೇಕ ಶಿವಯೋಗಿಗಳು ತಪಸ್ವಿಗಳಾಗಿ, ತಾವುಗಳಿಸಿದ ತಪಃಸಿದ್ಧಿಯನ್ನು ನಾಡಿನ ಜನತೆಯ ಕಲ್ಯಾಣಕ್ಕಾಗಿ ಧಾರೆ ಎರೆದು ಆನಂದಿಸಿರುತ್ತಾರೆ. ಕೆಲವು ಶ್ರೀಗಳು ಗ್ರಾಮ, ಪಟ್ಟಣ, ನಗರಗಳಲ್ಲಿಯೂ ಸಂಚರಿಸಿ ಜನರಿಗೆ ಧಾರ್ಮಿಕ ಮಾರ್ಗದರ್ಶನ ಮಾಡಿರುವುದು ಮಠದ ಚರಿತ್ರೆಯಿಂದ ತಿಳಿದು ಬರುತ್ತದೆ.

**ಮಠದ ಪರಂಪರೆ:-** ಬಂಡೆಮಠದ ಪರಂಪರೆಯಲ್ಲಿ ಅನೇಕ ಶಿವಯೋಗಿಗಳು ಮಹಾಮಹಿಮರಾಗಿ, ಪವಾಡ ಪುರುಷರಾಗಿ ಹೋಗಿರುತ್ತಾರೆ. ಅವರುಗಳಲ್ಲಿ ಕೆಲವು ಶ್ರೀಗಳ ದೇಶಕಾಲಾದಿಗಳನ್ನು ಕಂಡುಹಿಡಿಯುವುದು ಕಷ್ಟಕರವಾಗಿದೆ. ಅವುಗಳಲ್ಲಿ ದೊರೆತ ಶ್ರೀಗಳ ಹೆಸರುಗಳನ್ನು ಮಾತ್ರ ಇಲ್ಲಿ ಕೊಡಲಾಗಿದೆ. ದಕ್ಷಿಣ ಭಾರತದ ಕಾಂಚಿಕ್ಷೇತ್ರದಿಂದ ಓರ್ವ ಚರಮೂರ್ತಿ ಜಂಗಮರು ಬಂದು ಕಂಚುಕಲ್ ಬಂಡೆಯ ಗವಿಯಲ್ಲಿ ಕೆಲವುಕಾಲ ಅನುಷ್ಠಾನ ಮಾಡುತ್ತಾ ನಿಂತು ಒಂದು ವೀರಶೈವ ಮಠವನ್ನು ಸ್ಥಾಪಿಸಿದರು. ಆ ಮಠವೇ ಮೊದಮೊದಲು ಕಂಚಿಸ್ವಾಮಿಗಳ ಮಠ, ಕಂಚಗಲ್ ಮಠ, ಕ್ರಮೇಣ ಕಂಚಗಲ್ ಬಂಡೆಮಠ ಅಥವಾ ಬಂಡೆಮಠವೆಂದು ಕರೆಯುವುದು ವಾಡಿಕೆಯಾಗಿರುತ್ತದೆ.

ಈ ಮಠದ ಪರಂಪರೆಯಲ್ಲಿ ಬಂದ ಕೆಲವು ಸ್ವಾಮಿಗಳ ಹೆಸರನ್ನು ಇಲ್ಲಿ ಕೊಡ ಲಾಗಿದೆ, 1] ಶ್ರೀ ಚರಮೂರ್ತಿ ಕಂಚಿಸ್ವಾಮಿಗಳು. 2] ಶ್ರೀ ಚರಮೂರ್ತಿ ಗಂಗಾ ಧರಸ್ವಾಮಿಗಳು. 3] ಶ್ರೀ ಮಲ್ಲಿಕಾರ್ಜುನ ಸ್ವಾಮಿಗಳು 4] ಶ್ರೀ ತೋಂಟದಾರ ಸ್ವಾಮಿಗಳು 5] ಶ್ರೀ ಶಿವರುದ್ರಸ್ವಾಮಿಗಳು.

ಈ ಗುರು ಪುಂಗವರ ಸಮಾಧಿಗಳು ಮಠ ಮತ್ತು ಮಠದ ಎಲ್ಲೆ ಪ್ರದೇಶಗಳ ಇರುತ್ತವೆ. ಬಂಡೆಮಠದ ಪರಂಪರೆ ಬಗ್ಗೆ ಹೆಚ್ಚಿನ ಸಂಶೋಧನೆ ಅವಶ್ಯಕ.

ಬೆಂಗಳೂರು ತುಮಕೂರು ಪ್ರಾಂತೀಯ ಹೆದ್ದಾರಿಯಲ್ಲಿ ನೆಲಮಂಗಲಕ್ಕೆ ಮೂರು ಮೈಲಿಯಲ್ಲಿ ಹಾರೋಕೇತೋಹಳ್ಳಿ ಇದೆ. ಸಿದ್ಧಗಂಗಾ. ಶಿವಗಂಗಾ ಕಾಬ ಗಲ್ ಮುನೀಶ್ವರಗದ್ದುಗೆ, ಬಸವಣ್ಣದೇವರಮಠ ಮುಂತಾದ ಮಠ ಮಾನ್ಯಗಳಿಂದಲೂ ಬೆಟ್ಟಗುಡ್ಡಗಳ ಸಾಲುಗಳಿಂದಲೂ ಅರಣ್ಯ ಪ್ರದೇಶದ ಮರ-ಗಿಡಗಳ ಪ್ರಕೃ ಸೌಂದರ್ಯದಿಂದಲೂ ಅರ್ಕಾವತಿನದಿಯ ತಪ್ಪಲು ಪ್ರದೇಶದಲ್ಲಿ ಶಿವಶರಣರಬೀಡೆಂದ ಹಾರೋಕೇತೋಹಳ್ಳಿ ಪ್ರಸಿದ್ಧಿಪಡೆದಿದೆ. ಗುರು ಜಂಗಮರ ಸೇವಾನಿರತರ ಆದ ಪಟೇಲ್ ಚಿಕ್ಕವೀರಪ್ಪ ಮತ್ತು ಶರಣೆಬಸವಮ್ಮ ಆಚಾರವಂತರು ಮತ್ತು ಗುರುಲಿಂಗ ಜಂಗಮ ಪ್ರೇಮಿಗಳು, ಭಕ್ತಿವಂತರು ಎಂದು ಕೀರ್ತಿಪಡೆದಿದ್ದರು. ಇವ ಭಕ್ತಿ ಸೇವೆಗೆ ಮೆಚ್ಚಿದ ನೆಲಮಂಗಲದ ಬಸವಣ್ಣದೇವರಮಠದ ಶ್ರೀಗುರುಸಿದ್ಧಸ್ವಾಮಿ ಗಳು ಕಂಚುಕಲ್ ಬಂಡೇಮಠದ ಪೂಜ್ಯ ತೋಂಟದಾರ್ಯಸ್ವಾಮಿಗಳು, ಕಂಬ ಸ್ವಾಮಿಗಳು ಆಗಾಗ್ಗೆ ಶರಣ ಚಿಕ್ಕವೀರಪ್ಪನವರ ಮನೆಗೆ ಬಂದು ಧಾರ್ಮಿ ಮಾರ್ಗದರ್ಶನ ಮಾಡುತ್ತಿದ್ದರು. ಅವರ ಮನೆತನ ವಿನಯಕ್ಕೆ ಸಂಸ್ಕೃತಿಗೆ ಸದಾಚಾರಕ್ಕೆ ಹೆಸರಾಗಿತ್ತು. ಜಂಗಮ ಪ್ರೇಮಿಗಳಾದ ದಂಪತಿಗಳಿಗೆ ಶ್ರಾವಣ ಮಾಸದಲ್ಲಿ ನಡೆಯುತ್ತಿದ್ದ ಶರಣರ ಲೀಲಾವಿಲಾಸ, ವೀರಶೈವಮಹಾಪುರಾಣ. ಪ್ರವಚನಗಳನ್ನು ಕೇಳುವ ಸೌಭಾಗ್ಯ ದೊರೆಯುತಿತ್ತು. ಶರಣರ ಕಾಯಕ ತತ್ವಗಳನ್ನು ಮೈಗೂಡಿಸಿ ಕೊಂಡಿದ್ದ ದಂಪತಿಗಳಿಗೆ ಭಾಗ್ಯದ ಬಾಗಿಲು ತೆರೆದಂತೆ 14-4-1914 ರಂದು ಶಿವತೇಜೋವಿರಾಜಿತ ಶಿಶುವೊಂದು ಜನಿಸಿತು. ಆ ಶಿಶುವೇ ಕಂಚುಕಲ್ ಬಂಡೆ ಮಠದ ಶಿವರುದ್ರಸ್ವಾಮಿಗಳು.

ಗ್ರಾಮ ಚಿಕ್ಕದಾದರೂ ಶಿವಶರಣರ ಶೀಲಗಳನ್ನು ಅನುಸರಿಸುವ ಆದರ್ಶ ಗ್ರಾಮವಾಗಿತ್ತು ಹಾರೋಕೇತೋಹಳ್ಳಿ

"ಸತ್ಯರನುಡಿ ತೀರ್ಥ, ನಿತ್ಯರನಡೆ ತೀರ್ಥ,
ಉತ್ತಮರಸಂಗವದು ತೀರ್ಥ ಹರಿವನೀ,
ರೆತ್ತಣದು ತೀರ್ಥ ಸರ್ವಜ್ಞ"

ಸತ್ಯವಂತರ ಮಾತೆ ತೀರ್ಥವಾಗಿದೆ ನಿಜವಾಗಿ ಶರಣರ ಆಚಾರವೇ ತೀರ್ಥ, ಉತ್ತಮರ ಸಂಗವೆ ತೀರ್ಥ, ಹರಿವ ನೀರು ಯಾವತೀರ್ಥ ವೆಂದು ಸರ್ವಜ್ಞ ಹೇಳಿದ ಮಾತನ್ನು ತಿಳಿದಿದ್ದ ಚಿಕವೀರಪ್ಪ ದಂಪತಿಗಳು ಶಿವಯೋಗಿಗಳ ಸಂಗದಲ್ಲಿ ಇದ್ದು ಕೊಂಡು ಹರ-ಗುರು ಚರಮೂರ್ತಿಗಳ ಪ್ರೀತಿವಾತ್ಸಲ್ಯಕ್ಕೆ ಪಾತ್ರರಾಗಿದ್ದ ‹ಬೆಳೆವಪೈರು ಮೊಳಕೆಯಲ್ಲಿಯೇ, ಎಂಬಂತೆ ಶಿವರುದ್ರಸ್ವಾಮಿಗಳವರು ಚಿಕ್ಕವರಿದ್ದಾಗಲೇ ಆಚಾರ ವಿಚಾರಗಳನ್ನು ಮೈಗೂಡಿಸಿಕೊಂಡಿದ್ದರು. ಇವರ ವರ್ತನೆಯನ್ನು ಕಂಡ ತಂದೆ ತಾಯಿಗಳಿಗೆ ಅಮಿತಾನಂದ. ಗುರುಕರುಣೆಯಿಂದ ‹ಶಿವ, ಶಿವರುದ್ರನನ್ನು ನಮಗೆ ಕರುಣಿಸಿದ ಈತ ವಿದ್ಯವಂತನಾಗಿ ಧರ್ಮಪುರುಷನಾದರೆ. ನಮ್ಮಜೀವನ ಸಾರ್ಥಕವಾದೀತೆಂದು ಹಂಬಲಿಸಿದರು.

ಎಲ್ಲ ಮಕ್ಕಳಂತೆ ಹುಟ್ಟಿದ ಒಂದನೇ ವರ್ಷದಲ್ಲಿ ಮಗುವಿನ ಆಸಕ್ತಿಯನ್ನು ಗಮನಿಸಿದ ತಂದೆ-ತಾಯಿಗಳು ಮನೆತನದ ಗುರುಗಳಾದ ಕಂಚುಕಲ್ ಬಂಡೆಮಠದ ಶ್ರೀ ತೋಂಟದಾರ್ಯಸ್ವಾಮಿಗಳನ್ನ ಕರೆಯಿಸಿ ಶುಭಮುಹೂರ್ತದಲ್ಲಿ ಶ್ರೀ ಗಣಪತಿ ಪೂಜೆ, ಸರಸ್ವತಿಪೂಜೆ ಮಾಡಿಸಿ ರಜತ ತಟ್ಟೆಯಲ್ಲಿ ಅಕ್ಕಿಯನ್ನು ಹರಡಿ ಅದರಲ್ಲಿ ಚಿನ್ನದ ಕಡ್ಡಿಯಿಂದ “ಓಂ ನಮಃ ಶಿವಾಯಃ ಸಿದ್ಧಂನಮಃ” ಎಂದು ಶಿವರುದ್ರ ಸ್ವಾಮಿಯಿಂದ ಬರೆಯಿಸಿ ಅಕ್ಷರಾಭ್ಯಾಸ ಪ್ರಾರಂಭಿಸಿದರು. ಮಗುವಿಗೆ ಮನೆಯೇ ಮೊದಲ ಪಾಠಶಾಲೆ, ತಾಯಿಯೇ ಮೊದಲಗುರು ಮಾತೆಯ ಮಮತೆಯಲ್ಲಿ ಮಗು ಬೆಳೆದು ಬುದ್ಧಿವಂತನಾಗುತ್ತಾನೆ. ತಂದೆಯ ನಡವಳಿಕೆಯನ್ನು ಮಗ ಅನುಸರಿಸಿ ಜೀವನವನ್ನು ರೂಪಿಸಿಕೊಳ್ಳುತ್ತಾನೆ. ಆದ್ದರಿಂದ ತಂದೆ ತಾಯಿಗಳು ನಿಜವಾದಗುರು. ಮೂರನೆಯ ಗುರುವೇ ವಿದ್ಯಾಗುರು. ಆ ಗುರುವು ವಿದ್ಯಾರ್ಥಿಗೆ ಆಚಾರ–ವಿಚಾರ ಸಂಸ್ಕೃತಿಗಳನ್ನು ತಿಳಿಸಿ ಸುಸಂಸ್ಕೃತನನ್ನಾಗಿ ಮಾಡುತ್ತಾನೆ ಇದನ್ನು ಅಂತಹ ತಂದೆ ತಾಯಿಗಳು ಹಾರೋಕೇತೋಹಳ್ಳಿಯಲ್ಲಿ ಇದ್ದ ಪ್ರಾಥಮಿಕ ಶಾಲೆಗೆ ಶಿವರುದ್ರ ಸ್ವಾಮಿಗಳನ್ನು ಸೇರಿಸಿದರು. ಆಸಕ್ತಿಯಿಂದ ಅಭ್ಯಾಸಮಾಡಿ ಗುರುಹಿರಿಯರಲ್ಲಿ ಭಕ್ತಿ ಗೌರವಗಳಿಂದ ನಡೆದು ಪಾಥಮಿಕ ಶಿಕ್ಷಣವನ್ನು ಅದೇಗ್ರಾಮದಲ್ಲಿ ಮುಗಿಸಿದರು

ಮುಂದಿನ ವಿದ್ಯಾಭ್ಯಾಸಕ್ಕಾಗಿ ತಂದೆಯವರು ಸೋಲೂರಿನ ಮಾಧ್ಯಮಿಕ ಶಾಲೆಗೆ ಸೇರಿಸಿದರು. ಅಲ್ಲಿಯ ಉಪಾಧ್ಯಾಯರುಕನ್ನಡ, ಇಂಗ್ಲಿಷ್ ಜೊತೆಗೆ ದೇಶಭಕ್ತಿಗೀತೆ, ಮಹಾಪುರುಷರ ಜೀವನಚರಿತ್ರೆ' ನೀತಿಶತಕ ಮುಂತಾದ ಗ್ರಂಥಗಳನ್ನು ಅಭ್ಯಾಸ ಮಾಡಿಸಿದರು. ಶಿವರುದ್ರಸ್ವಾಮಿ ಶ್ರದ್ಧೆಯಿಂದ ಅಭ್ಯಾಸಮಾಡಿ 1921 ರಲ್ಲಿ ಲೋಯರ್‌ಸೆಕೆಂಡರಿ (ಎಲ್.ಎಸ್) ಪರೀಕ್ಷೆಯಲ್ಲಿ ಉತ್ತೀರ್ಣರಾದರು.

ಧರ್ಮ ಮತ್ತು ಶಿಕ್ಷಣದ ಬಗ್ಗೆ ಹೆಚ್ಚು ಆಸಕ್ತಿಯನ್ನು ಹೊಂದಿದ ಶಿವರುದ್ರಸ್ವಾಮಿಯನ್ನು ಹೆಚ್ಚಿನ ವಿದ್ಯಾಭ್ಯಾಸಕ್ಕಾಗಿ ಬೆಂಗಳೂರು ಶ್ರೀ ಚಾಮ-ರಾಜೇಂದ್ರ ಸಂಸ್ಕೃತ ಕಾಲೇಜಿಗೆ ಕರೆತಂದು ಸೇರಿಸಿದರು. ಊಟ-ವಸತಿಗೆ ಭಕ್ತರ ಮನೆಯಲ್ಲಿ ಅನುಕೂಲ ಮಾಡಿಕೊಟ್ಟರು. ಚುರುಕುಬುದ್ಧಿಯ ಶಿವರುದ್ರಸ್ವಾಮಿ ವೇದ-ಸಂಸ್ಕೃತ ಗ್ರಂಥಗಳನ್ನು ಅಭ್ಯಾಸಮಾಡಿ 1930ರಲ್ಲಿ ಸಂಸ್ಕೃತ ಪ್ರಥಮ ಪರೀಕ್ಷೆಯಲ್ಲಿ ಉತ್ತೀರ್ಣರಾದರು.

ಕಂಡ ಭಕ್ತರಿಗೆ ಕೈಮುಗಿವಾತನೇ ಭಕ್ತ.
ಮೃದುವಚನವೇ ಸಕಲ ಜಪಂಗಳಯ್ಯ,
ಮೃದುವಚನವೇ ಸಕಲ ತಪಂಗಳಯ್ಯ,
ಸದುವಿನಯವೇ ಸದಾಶಿವನೊಲಿಮೆಯಯ್ಯ
ಕೂಡಲ ಸಂಗಮದೇವ ನಂತಲ್ಲದೊಲ್ಲನಯ್ಯ.

ಎಂಬ ಅಣ್ಣನವರ ವಚನವನ್ನು ಪರಿಪಾಲಿಸುತ್ತಿದ್ದ ಶಿವರುದ್ರಸ್ವಾಮಿಯ ಮೃದುವಚನ, ಸದಾಚಾರ, ಸದುವಿನಯ, ನಡತೆಯಿಂದ ಕಾಲೇಜಿನ ಆಚಾರ್ಯರ ಪ್ರೀತಿಗೌರವಗಳಿಗೆ ಪಾತ್ರರಾಗಿ ಉತ್ತಮ ವಿದ್ಯಾರ್ಥಿ ಎಂದು ಹೆಸರು ಗಳಿಸಿದರು.

ಕರ್ನಾಟಕದಲ್ಲಿ ವೀರಶೈವಮಠಗಳ ಕಾರ್ಯ ಮಹತ್ವವಾದದ್ದು. ಬೇರೆ ಮಠಗಳಂತೆ ದೇವರಪೂಜೆ. ನಾಲ್ಕಾರು ಪಂಡಿತರ ಆಶ್ರಯಕ್ಕೆ ಮೀಸಲಾಗದೆ ಆಧುನಿಕ ಕಾಲಧರ್ಮಗಳಿಗೆ ಅನುಗುಣವಾಗಿ ಸಾರ್ವಜನಿಕರ ಉದ್ಧಾರ ಹಾಗೂ ವಿದ್ಯಾಭ್ಯಾಸಕ್ಕೆ ಅನುಕೂಲ ಮಾಡಿರುತ್ತವೆ. ಸುತ್ತೂರುಮಠ, ಹುಬ್ಬಳ್ಳಿ ಮೂರು ಸಾವಿರಮಠ, ಚಿತ್ರದುರ್ಗ, ಶಿರಿಗೆರೆ, ಪಂಚಪೀಠಗಳು, ದೇಗುಲಮಠ, ಮರಳೇಗವಿ-ಮಠ, ಶಿವಯೋಗಮಂದಿರ, ಆಂಕನಹಳ್ಳಿಗವಿಮಠ, ಮತ್ತು ಬಂಡೇಮಠ ಮುಂತಾ-ದವುಗಳು. ಇವುಗಳಲ್ಲಿ ಅಗ್ರಸ್ಥಾನ ಸಿದ್ಧಗಂಗಾ ಕ್ಷೇತ್ರ. ಸಿದ್ಧಗಂಗಾ ಮಠವು ಪ್ರಾಚೀನ ಮತ್ತು ಆಧುನಿಕ ವಿದ್ಯಾಭ್ಯಾಸಕ್ಕೆ ಆದ್ಯತೆನೀಡಿ ಗ್ರಾಮಾಂತರ ಮಕ್ಕಳಿಗೆ ಜ್ಞಾನದಾನವನ್ನು ನೀಡುವ ಒಂದು ವಿಶ್ವವಿದ್ಯಾಲಯವೆಂದು ಕರ್ನಾಟಕ-ದಲ್ಲಿ ಕೀರ್ತಿಪಡೆದಿದೆ. ಶ್ರೀ ಉದ್ಧಾನಶಿವಯೋಗಿಗಳ ತಪಸ್ಸಿನ ಶಕ್ತಿಯಿಂದ ಚೇತನ-ಗೊಂಡ ಪೂಜ್ಯ ಡಾ|| ಶಿವಕುಮಾರಸ್ವಾಮಿಗಳವರ ಕರ್ತೃತ್ವಶಕ್ತಿಯಿಂದ ಬೃಹತ್ ಶಿಕ್ಷಣ ಸಂಸ್ಥೆಗಳು ಪ್ರಾರಂಭಿಸಲ್ಪಟ್ಟಿವೆ. ವೇದ ಮತ್ತು ಸಂಸ್ಕೃತಪಾಠಶಾಲೆ-ಕಾಲೇಜು ಪ್ರಾಥಮಿಕ, ಮಾಧ್ಯಮಿಕ, ಪ್ರೌಢಶಾಲೆಗಳು, ಉಚ್ಚಶಿಕ್ಷಣ, ತಾಂತ್ರಿಕಶಿಕ್ಷಣ ವಿಜ್ಞಾನ, ಇಂಜಿನಿಯರಿಂಗ್‌ಕಾಲೇಜು ಮತ್ತು ವೃತ್ತಿ ತರಬೇತಿ ಸಂಸ್ಥೆಗಳನ್ನು ತೆರೆವ. ಸುಮಾರು ೨೫ ಸಹಸ್ರ ವಿದ್ಯಾರ್ಥಿಗಳು ಈ ಶಿಕ್ಷಣ ಸಂಸ್ಥೆಯಲ್ಲಿ ಅಭ್ಯಾಸ

ಮಾಡುತ್ತಿದ್ದಾರೆ. ಸುಮಾರು ನಾಲ್ಕು ಸಾವಿರ ಎಲ್ಲಾ ವರ್ಗದ ವಿದ್ಯಾರ್ಥಿಗಳಿಗೆ ಊಟ-ವಸತಿಗೆ ಅನುಕೂಲಮಾಡಿದ್ದಾರೆ ಪ್ರತಿನಿತ್ಯ ಬರುವ ಸಾವಿರಾರು ಭಕ್ತಾದಿಗಳಿಗೆ ಇಲ್ಲಿ ದಾಸೋಹ ನಡೆಯುತ್ತದೆ.

ಮಠಾಧಿಪತಿಗಳಿಗೆ ಉತ್ತಮ ಶಿಕ್ಷಣ ಮತ್ತು ಧಾರ್ಮಿಕ ತರಬೇತಿ ನೀಡುವ ಮಠ ಸಿದ್ಧಗಂಗಾಕ್ಷೇತ್ರವೆಂದು ನಾಡಿನಲ್ಲಿ ಪ್ರಸಿದ್ಧಿ ಪಡೆದಿದೆ. ಹಿರಿಯರ ಮಾರ್ಗ-ದರ್ಶನದಿಂದ ಹೆಚ್ಚಿನ ಶಿಕ್ಷಣಕ್ಕಾಗಿ ಶಿವರುದ್ರಸ್ವಾಮಿಗಳು ಸಿದ್ಧಗಂಗಾ ಗುರುಕುಲಕ್ಕೆ ಬಂದು ಸೇರಿದರು ಹೊಸವಾತಾವರಣ, ಗುರುಕುಲದ ಅಧಿಪತಿಗಳ ಮಾರ್ಗ-ದರ್ಶನ, ತನ್ನಂತೆಯೇ ಅಲ್ಲಿಗೆ ಓದಲು ಬಂದ ಅನೇಕ ವಟುಗಳ ಸ್ನೇಹ ವಾತಾವರಣದಲ್ಲ ವಿದ್ಯಾಭ್ಯಾಸ ಮುಂದುವರಿಯಿತು. ಎಳೆ ವಯಸ್ಸು, ಬೆಳೆಯುವ ಮನಸ್ಸು, ಪ್ರತಿನಿತ್ಯ ಪ್ರಾತಃಕಾಲದಲ್ಲಿಯೇ ಏಳುವುದು, ಸ್ನಾನ, ಪೂಜೆ, ಸಂಸ್ಕೃತ ಹಾಗೂ ವಚನ ಸಾಹಿತ್ಯ ಪಠಣ, ಗುರುಕುಲದ ನಿಯಮಗಳನ್ನು ತಪ್ಪದೇ ಪರಿಪಾಲಿಸುತ್ತಿದ್ದರು. ಈ ವೊದಲೇ ದೇಗುಲಮಠದ ಶ್ರೀ ಮಹಾಲಿಂಗಸ್ವಾಮಿಗಳು ಅಂಕನಹಳ್ಳಿಗವಿಮಠದ ಶ್ರೀ ಸಿದ್ಧಲಿಂಗಶಿವಾಚಾರ್ಯಸ್ವಾಮಿಗಳು ಇನ್ನೂ ಮುಂತಾದ ಮಠಾಧಿಪತಿಗಳು ಇಲ್ಲಿ ಅಭ್ಯಾಸ ಮಾಡುತ್ತಿದ್ದರಿಂದ ಅವರ ಸ್ನೇಹ ಮತ್ತು ಸೇವಾ ಮಾಡುವ ಅವಕಾಶದೊರೆಯಿತು. ಶ್ರೀ ಮಠದ ತಪೋಪುಂಗವರಾದ ಶ್ರೀ ಉದ್ಧಾನ ಶಿವಯೋಗಿಗಳ ಸಾನಿಧ್ಯದಲ್ಲಿ ಡಾ|| ಶ್ರೀ ಶಿವಕುಮಾರಸ್ವಾಮಿಗಳವರ ಮಾರ್ಗ ದರ್ಶನದಲ್ಲಿ ವೇದ-ಸಂಸ್ಕೃತ, ಕಾವ್ಯ-ಸಾಹಿತ್ಯ, ವಿದ್ವತ್ ಪರೀಕ್ಷೆಗಳನ್ನು ಅಭ್ಯಾಸ ಮಾಡಿ ಉತ್ತೀರ್ಣರಾದರು. ಇಲ್ಲಿಗೆ ಆಗಾಗ್ಗೆ ಬರುತ್ತಿದ್ದ ದೇಗುಲಮಠದ ಶ್ರೀ ನಿರ್ವಾಣ ಸ್ವಾಮಿಗಳ, ಮೈಸೂರು ಗವಿಮಠದ ಶ್ರೀ ಗೌರಿಶಂಕರಸ್ವಾಮಿಗಳ ದರ್ಶನ ಆಶೀರ್ವಾದ ಒಳ್ಳೆಯ ಪ್ರಭಾವ ಬೀರಿತು.

"ಕಾಮಧೇನುವಿನ ಶಿಶುಕಾಮಧೇನುವಪ್ಪದು ತಪ್ಪದು ದಿಟದಿಟ ನೋಡಾ।
ಸದ್ಗುರುವಿನಿಂದಾದ ಶಿಷ್ಯ ಸದ್ಗುರುವಪ್ಪದು ದಿಟದಿಟ ನೋಡಾ ॥
ಯಥಾಬೀಜಂ ತಥಾಕುರಂ। ಎಂಬ ವಾಕ್ಯ ತಪ್ಪದು, ಶಿವ ಬಲ್ಲನು

ಉರಿಲಿಂಗೇಶ್ವರ ಪ್ರಿಯವಿಶ್ವೇಶ್ವರಾ" ಎಂಬ ಶರಣರ ನುಡಿಯಂತೆ ಸಿದ್ಧಗಂಗಾ ಶಿವಯೋಗಿಗಳ ಉಪದೇಶದಿಂದ ಶಿವರುದ್ರಸ್ವಾಮಿಗಳು ಸದ್ಗುರುವಾಗಬಲ್ಲ ಆಧ್ಯಾತ್ಮಿಕ ಶಕ್ತಿಯನ್ನು ಪಡೆದುಕೊಂಡು ಸಿದ್ಧಗಂಗಾಕ್ಷೇತ್ರದಲ್ಲಿ ಸಿದ್ಧಿಯನ್ನು ಗಳಿಸಿದರು.

ಶಿವರುದ್ರಸ್ವಾಮಿಗಳ ಹಿನ್ನೆಲೆಯನ್ನು ಅರಿತವರಿಗೆ ಅವರ ಒಲವು ಎತ್ತ ಎಂಬುದು ತಿಳಿಯದಿರದು. ಬಾಲ್ಯದಿಂದಲೂ ಗುರು-ಜಂಗಮ ಪ್ರೇಮಿಯಾದ ತಂದೆ-ತಾಯಿಗಳ ಮಾರ್ಗದರ್ಶನ. ಸಿದ್ಧಗಂಗಾಕ್ಷೇತ್ರದಲ್ಲಿ ವಿದ್ಯಾಭ್ಯಾಸ ಮಾಡುತ್ತಿದ್ದಾಗ, ಸದ್ಗುರು

ಸೇವೆ, ಗುರುಸಾನಿಧ್ಯ, ಶಿವಾನುಭವ, ಶಿವಯೋಗಸಾಧನೆ, ಲಿಂಗಪೂಜಾನಿಷ್ಠೆ ತ್ಯಾಗಜೀವನದಲ್ಲಿ ಆಸಕ್ತಿ ಪರೋಪಕಾರಪ್ರವೃತ್ತಿ, ಅವರ ನಡೆ-ನುಡಿ, ರೀತಿ ನೀ ಧಾರ್ಮಿಕ ಭಾವನೆಗಳು ಎದ್ದು ಕಾಣುತ್ತಿದ್ದವು. ಎತ್ತರವಾದ ದೇಹ, ಗೋ ಬಣ್ಣದ ಮೈ ಮಾಟ, ಮುಖದಲ್ಲಿ ತೇಜಸ್ಸು, ವಿರಕ್ತಾಶ್ರಮಕ್ಕೆ ಕಡೆದು ಮಾಡಿಸಿ ಮೂರ್ತಿಯಂತೆ ಅವರ ಜೀವನ ಪರಿಪಕ್ವವಾಗಿತ್ತು.

**ಗುರು ಕರುಣೆ:**–ಕಂಚುಗಲ್‌ಬಂಡೆಮಠದ ಚರಮೂರ್ತಿ ಶ್ರೀ ತೋಂಟದಾ ಸ್ವಾಮಿಗಳವರಿಗೆ ವೃದ್ಧಾಪ್ಯಪ್ರಾಪ್ತವಾಗಲು ಶಿವರುದ್ರಸ್ವಾಮಿಗಳ ನಡೆ-ನುಡಿಗಳನ್ನು ಆಚಾರ-ವಿಚಾರಗಳನ್ನು ಶ್ರೀ ಉದ್ಧಾನಶಿವಯೋಗಿಗಳಿಂದ ತಿಳಿದು ಅವರ ಮಾತಾ ಪಿತೃಗಳ ಅನುಮತಿ ಪಡೆದು, ತಮ್ಮ ಮಠದ ಉತ್ತರಾಧಿಕಾರಿಯನ್ನಾಗಿ ಸ್ವೀಕರಿ 1938 ರಂದು ಶುಭ ಮುಹೂರ್ತದಲ್ಲಿ ಸಿದ್ಧಗಂಗಾಮಠದ ತ್ರಿವಿಧ ದಾಸೋಹ ಮೂರ್ತಿ ಗಳಾದ ಪೂಜ್ಯ ಶ್ರೀ ಶಿವಕುಮಾರಸ್ವಾಮಿಗಳ ದಿವ್ಯ ನೇತೃತ್ವದಲ್ಲಿ ಕನಕಪುರ ದೇಗು ಮಠಾಧೀಶ್ವರರಾದ ಚರಮೂರ್ತಿ ನಿರ್ವಾಣಸ್ವಾಮಿಗಳವರಿಂದ ಷಟ್‌ಸ್ಥಲ ಬ್ರಹ್ಮೋ ದೇಶದೊಡನೆ ವೀರಶೈವ ವಿಧಿಗನುಸಾರವಾಗಿ ಕಂಚುಗಲ್ ಬಂಡೆ ಮಠ ಚರಪಟ್ಟಾಧಿಕಾರವನ್ನು ಶ್ರೀ ತೋಂಟದಾರ್ಯಸ್ವಾಮಿಗಳವರ ಅಮೃತಹಸ್ತದಿಂ ಶ್ರೀ ಶಿವರುದ್ರಸ್ವಾಮಿಗಳವರಿಗೆ ವಹಿಸಿಕೊಡಲಾಯಿತು. ಹತ್ತಾರು ಜನ ಹರ-ಗುರ ಚರಮೂರ್ತಿಗಳು ಸಾವಿರಾರು ಜನ ಮಠದ ಭಕ್ತಾದಿಗಳು ಬಂದುಭಾಗವಹಿಸಿದ್ದರು ಕ್ರಮೇಣ ನೂತನ ಶ್ರೀಗಳು ಮಠದ ಕಾರ್ಯವನ್ನು ನಿರ್ವಹಿಸಲು ಪ್ರಾರಂಭಿಸಿದ್ದು ಭಕ್ತಾದಿಗಳಿಗೆ ಸಂತೋಷವನ್ನುಂಟು ಮಾಡಿತು.

ಅಧಿಕಾರ ವಹಿಸಿಕೊಟ್ಟನಂತರ ಶ್ರೀ ತೋಂಟದಾರ್ಯಸ್ವಾಮಿಗಳು ತಮ ಅಮೂಲ್ಯ ಸಮಯವನ್ನು ಶಿವಯೋಗದ ಕಡೆ ತಿರುಗಿಸಿದರು.

> ಜ್ಞಾನಂ ಶಿವಮಯಂ ಭಕ್ತಿಃ ಶೈವೀಧ್ಯಾನಂ ಶಿವಾತ್ಮಕಂ ।
> ಶಿವವ್ರತಂ ಶಿವಾರ್ಚೇತಿ ಶಿವಯೋಗೋಹಿ ಪಂಚಧಾ ॥

ಶಿವಯೋಗದಲ್ಲಿ ಉಕ್ತವಾಗಿರುವ ಶಿವಜ್ಞಾನ, ಶಿವಭಕ್ತಿ, ಶಿವಧ್ಯಾನ ಶಿವವ್ರತ, ಶಿ ಪೂಜಾದಿಗಳಲ್ಲಿ ನಿರತರಾಗಿ ಪರಮಾತ್ಮನಲ್ಲಿ ಮನಸ್ಸನ್ನು ಬೆರೆಸಿ 1939 ರಲ್ಲಿ ಶಿವೈಕ್ಯ ರಾದರು.

**ಕಾರ್ಯಸಾಧನೆ:**- ಸಿದ್ಧಗಂಗಾ ಕ್ಷೇತ್ರದಲ್ಲಿಯೇ ಕೆಲವುಕಾಲ ನಿಂತು ಮಠ ವಿದ್ವಾಂಸರಿಂದ ಶಿವಾನುಭವ, ಶರಣಸಾಹಿತ್ಯ, ವೀರಶೈವಸಿದ್ಧಾಂತ ಗ್ರಂಥಗಳ ಪರಿ ಚಯ, ಕೈವಲ್ಯ ಕಲ್ಪವಲ್ಲರಿ, ಮುಂತಾದ ಧರ್ಮಗ್ರಂಥಗಳನ್ನು ಅಭ್ಯಾಸ ಮಾಡಿದರು

ಅನಂತರ ಬಂಡೆಮಠಕ್ಕೆ ಬಂದು ಮಠದ ಕಾರ್ಯಗಳ ಜೊತೆಗೆ ಭಕ್ತರು ಕರೆದಾಗ ಬಿನ್ನಹ ಬಿಡುಗಡೆಗೂ, ಧಾರ್ಮಿಕ ಸಭೆಗಳಿಗೂ ಹೋಗಿ ಬರುತ್ತಿದ್ದರು. ಆ ಪ್ರದೇಶ ದಲ್ಲಿ ಶಾಲೆಗಳಿಲ್ಲದೆ ಅನೇಕ ಗ್ರಾಮದ ಮಕ್ಕಳು ಕುಣಿಗಲ್, ಮಾಗಡಿ, ಸೋಲೂರು, ನೆಲಮಂಗಲಗಳಿಗೆ ಹೋಗಿ ಬರಬೇಕಾಗಿತ್ತು. ಇದನ್ನೆಲ್ಲಾ ಗಮನಿಸಿದ ಶ್ರೀ ಶಿವರುದ್ರ ಸ್ವಾಮಿಗಳು 1962ರಲ್ಲಿ ಶ್ರೀ ತೋಂಟದಾರ್ಯ ಸಂಸ್ಕೃತ ವೇದ ಪಾಠಶಾಲೆ, ಮಾಧ್ಯ ಮಿಕ ಶಾಲೆಗಳನ್ನು ತೆರೆದರು. ಅನಂತರ ಸಿದ್ಧಗಂಗಾ ಶ್ರೀಗಳವರಲ್ಲಿ ಭಕ್ತ ವೃಂದದ ವರೊಡನೆ ಹೋಗಿ ಮಾತನಾಡಿ ಅವರ ಆಶೀರ್ವಾದದಿಂದ 1963ರಲ್ಲಿ ಶ್ರೀ ಸಿದ್ಧಗಂಗಾ ಗ್ರಾಮಾಂತರ ಪ್ರೌಢಶಾಲೆ ಸ್ಥಾಪನೆ ಮತ್ತು ಶ್ರೀ ಮಹಾಲಿಂಗೇಶ್ವರ ವಿದ್ಯಾರ್ಥಿನಿಲಯವನ್ನು ಪ್ರಾರಂಭಿಸಿದರು. ಎಲ್ಲವರ್ಗದ ಸುಮಾರು 200ಜನ ಬಡ ವಿದ್ಯಾರ್ಥಿಗಳಿಗೆ ಉಚಿತ ಊಟ-ವಸತಿಗಳನ್ನು ಮಾಡಿಕೊಟ್ಟರು. ಈ ಶಿಕ್ಷಣ ಸಂಸ್ಥೆಗಳಲ್ಲಿ ಹಾಲಿ 200ಜನ ವಿದ್ಯಾರ್ಥಿಗಳು ಅಭ್ಯಾಸ ಮಾಡುತ್ತಿದ್ದಾರೆ. ಸುಮಾರು ಮುವತ್ತು ಜನ ಉಪಾಧ್ಯಾಯರು ಮತ್ತು ಸಿಬ್ಬಂದಿ ವರ್ಗದವರು ಆಶ್ರಯ ಪಡೆದಿದ್ದಾರೆ. ಕಟ್ಟಡಗಳ ನಿರ್ಮಾಣ, ಮಠದಕಟ್ಟಡಜೀರ್ಣೋದ್ಧಾರ, ಒಂದು ವಿದ್ಯಾರ್ಥಿನಿಲಯ, ಪ್ರಸಾದನಿಲಯ, ಸಂಸ್ಕೃತ ಪಾಠಶಾಲೆ, ಪ್ರೌಢಶಾಲೆ ಮುಂತಾದ ಕಟ್ಟಡಗಳನ್ನು ಆಧುನಿಕ ರೀತಿಯಲ್ಲಿ ನಿರ್ಮಿಸಿ ಆ ಪ್ರದೇಶದ ಜನಸಾಮಾನ್ಯರ ಮಕ್ಕಳ ಜ್ಞಾನಭಿವೃದ್ಧಿಗೆ ಅನುಕೂಲ ಮಾಡಿದ್ದಾರೆ.

ಸಿದ್ಧಗಂಗಾ ಕಮ್ಮಟ:– ಆಧುನಿಕ ಕಾಲದಲ್ಲಿ ಮಠಾಧೀಶ್ವರರನ್ನು ತಯಾರು ಮಾಡುವ ಮಹಾನ್ ಕಮ್ಮಟ ಸಿದ್ಧಗಂಗಾ ಕ್ಷೇತ್ರ. ಈ ಕ್ಷೇತ್ರದಲ್ಲಿ ರೂಪಗೊಂಡ ನೂರಾರು ಮಠಾಧೀಶ್ವರರು ಕರ್ನಾಟಕದ ಬಹುಭಾಗಗಳಲ್ಲಿರುವ ಗುರುವರ್ಗ ಮತ್ತು ವಿರಕ್ತವರ್ಗದ ಮಠಗಳ ಅಧಿಪತಿಗಳಾಗಿದ್ದಾರೆ. ಶ್ರೀಶ್ರೀಗಳವರ ಮಾರ್ಗದರ್ಶನದಿಂದ ತಮ್ಮ ತಮ್ಮ ಮಠಗಳಲ್ಲಿಯೂ ಅನೇಕ ಶಾಲೆ ಕಾಲೇಜುಗಳನ್ನು ಪ್ರಾರಂಭಿಸಿ ಆ ಪ್ರಾಂತ್ಯದ ಮಕ್ಕಳಿಗೆ ಶಿಕ್ಷಣ ನೀಡುತ್ತಿದ್ದಾರೆ. ಅವರುಗಳಲ್ಲಿ ಮುಖ್ಯವೆಂದರೆ ದೇಗುಲ ಮಠದ ಶ್ರೀ ಮಹಾಲಿಂಗಸ್ವಾಮಿಗಳು, ಆಂಕನಹಳ್ಳಿಗವಿಮಠದ ಶ್ರೀ ಸಿದ್ಧಲಿಂಗ ಶಿವಾಚಾರ್ಯಸ್ವಾಮಿಗಳು. ಕಂಚುಕಲ್‌ಬಂಡೆಮಠ ಶ್ರೀ ಶಿವರುದ್ರಸ್ವಾಮಿಗಳು ಸಹ ಇಲ್ಲಿಯೇ ರೂಪುಗೊಂಡವರು, ಇವರ ಆಚಾರ, ವಿಚಾರ, ಸೇವಾಮನೋಭಾವನೆ ಎಲ್ಲರನ್ನೂ ಪ್ರೀತಿಸುವ ವಿಶಾಲ ಗುಣಗಳು, ತ್ಯಾಗಮನೋವೃತ್ತಿ, ಎಲ್ಲರಲ್ಲಿಯೂ ಕಂಡು ಬರುತ್ತದೆ. ಈ ತ್ರಿಮೂರ್ತಿಗಳ ದೇಹಗಳು ಬೇರೆ-ಬೇರೆಯಾದರೂ ಆತ್ಮ ಒಂದೆ ಎಂಬಂತೆ ನಡೆದುಕೊಳ್ಳುತ್ತಿದ್ದರು. ಯಾವ ಕಾರ್ಯ ಮಾಡಬೇಕಾದರೂ ದೇಗುಲ ಮಠದ ಶ್ರೀಗಳನ್ನು ಕೇಳದೆ ಮಾಡುತ್ತಿರಲಿಲ್ಲ. ಅವರವಾಣಿ ಇವರಿಗೆ ಅಮರ ಸಂದೇಶ. ಅವರಿಗೂ ಇವರಲ್ಲಿ ಅಷ್ಟೇ, ಪ್ರೀತಿ ಅಭಿಮಾನ. ಅವರನ್ನು ಯಾವಾಗಲೂ ಎಡೆಬಿಡದೆ ಇರುತ್ತಿದ್ದ ಇವರಿಗೆ ಅವರು ಶಿವೈಕ್ಯರಾದಾಗ ಆದ ದು:ಖ ಹೇಳತೀರದು.

**ಸಮನ್ವಯ:-** ಸಾತ್ವಿಕ ಸ್ವಭಾವದ ಸಮನ್ವಯಮೂರ್ತಿ ಶ್ರೀ ಶಿವರುದ್ರ ಸ್ವಾಮಿಗಳು ಧರ್ಮಾಚರಣೆಯೇ ಐಶ್ವರ್ಯದ ರಕ್ಷಣೋಪಾಯ ಉಪಕಾರಸ್ಮರಣೆಯೇ ಮನುಷ್ಯನಶಕ್ತಿ, ಪರೋಪಕಾರವೆ ಅಧಿಕಾರಕ್ಕೆ ಪ್ರಯೋಜನ ಗುರುದೇವತಾ ವಿಶ್ವಾಸವೇ ನಿಜಮಂತ್ರ ಜಾತಿ-ಮತಗಳ ಬಂಧು-ಬಳಗಗಳ ಶಿಕ್ವಾಟವನ್ನುದೂರಮಾಡಿ ಧರ್ಮಬುದ್ಧಿಯಿಂದ ನಡೆದರೆ ಆತ್ಮಶಾಂತಿ ಎಲ್ಲರನ್ನು ಪ್ರೀತಿಸಿ ಸಮನ್ವಯತೆಯಿಂದ ಬಾಳುವ ಮಾನವರಜೀವನ ಸಾರ್ಥಕ ವಾಗುತ್ತದೆ ಎಂಬುದೇ ಶ್ರೀಗಳ ಸಮನ್ವಯದರ್ಶನ ●

---

## ಸಿದ್ಧ ಶರಣ

**ಪಾರ್ವತಿಗೌರೀಶಂಕರ್**
ಎ. ಎ. ಹನಗೋದಿಮಠ, ನೆಹರೂನಗರ,
ಬ್ಯಾಡಗಿ, ಧಾರವಾಡ ಜಿಲ್ಲೆ.

ಶಿವಯೋಗಿ ನೀ ಶರಣ ಬಾರಯ್ಯ
ಸತ್ಯದ ಮುಖವ ತೋರುಬಾ
ಮಹಿಮಾತ್ಮನೆ, ಅಧರ್ಮದ ಸುಳಿಯ
ಜಿಗುಟಿ ಧರ್ಮದ ಬೀಜವ ಎಲ್ಲರೊಳ್
ನೀ ಬಿತ್ತುಬಾ ಕಾಲದ ಅರಿವಿಲ್ಲದೆ
ವ್ಯರ್ಥವಾಗುತಿದೆ ದಿನಗಳ ಸಾಲುಸಾಲು
ನೀ ಏಕೆ ಗೌಪ್ಯವಾಗಿರುವೆ ಭಾರತಾಂಬೆಯ
ವೀರಕುವರರ ನೀನೆಚ್ಚರಿಸು ಬಾ
ಅಸತ್ಯದ ಉರಿಯಲಿ ಕುರುಡಾಗಿಹ
ಕಣ್ಣುಗಳನು ತೆರೆಸುಬಾ ಅಜ್ಞಾನದತ್ತ
ಬಾಗುತಿಹ ಮನಗಳನು ಅಲ್ಲೋಲ
ಕಲ್ಲೋಲಿಸದೆ ನೀನೆತ್ತಿ ಹಿಡಿದು
ಬದುಕಿಗೊಂದು ಮುಕ್ತಿಮಾರ್ಗವ
ತೋರುವ ಊರುಗೋಲು ನೀನಾಗು ಬಾ
ಬಾರಯ್ಯ ನೀ ದಿವ್ಯ ಮೂರುತಿ ಸಿದ್ಧಗಂಗಾ
ಶರಣ ಬಾರಯ್ಯ ಬಾ ಬಾ

# ಭಾರತದ ನೂತನ ಪ್ರಧಾನಿ ವಿಶ್ವನಾಥ ಪ್ರತಾಪ ಸಿಂಗರ ಸಂಕ್ಷಿಪ್ತ ಪರಿಚಯ

–ಕೆ. ಎಂ. ರುದ್ರಪ್ಪ, ಮಾಜಿ ವಿಧಾನಸಭಾ ಸದಸ್ಯರು, ಹಾಸನ.

"ಭಾರತ ದೇಶದಲ್ಲಿ ಉತ್ತರ ಪ್ರದೇಶಕ್ಕೆ ಒಂದು ವಿಶಿಷ್ಟ ಸ್ಥಾನವಿದೆ. ರಾಷ್ಟ್ರದ ರಾಜಕೀಯದಲ್ಲಿ ಇದರ ಪ್ರಭಾವವೇ ಹೆಚ್ಚು. ಈ ರಾಜ್ಯ ಪಶ್ಚಿಮ ಭಾಗದಲ್ಲಿ ರೈತಾಪಿ ವರ್ಗದ ಜಾಟಕ ಸಂಖ್ಯೆ ಬಹು ದೊಡ್ಡದು. ದಕ್ಷಿಣ ಹಾಗೂ ಪೂರ್ವ ಭಾಗದಲ್ಲಿ ಠಾಕೂರರು (ರಜಪೂತರು) ಗಣನೀಯವಾದ ಸಂಖ್ಯೆಯಲ್ಲಿರು- ವುದಲ್ಲದೆ ಗ್ರಾಮೀಣ ಪ್ರದೇಶಗಳಲ್ಲಿ ತುಂಬಾ ಪ್ರಭಾವಶಾಲಿಗಳಾಗಿರುತ್ತಾರೆ. ಯಾದವ, ಕೂರ್ಮಿ, ಮಲ್ಲಾ ಮತ್ತು ಕಾಯಸ್ಥ ಕೋಮಿನವರು ಇವರ ಮಾತಿಗೆ ಬೆಲೆ ಕೊಡುತ್ತಾರೆ. ಈ ಭಾಗದ ಠಾಕೂರ್ ವಂಶಕ್ಕೆ ಸೇರಿದ ದಯಾ ಎಂಬುದೊಂದು ಚಿಕ್ಕ ಆಶ್ರಿತ ಸಂಸ್ಥಾನವಾಗಿದ್ದು, ಅದರ ರಾಜನಿಗೆ ಇಬ್ಬರು ಪತ್ನಿಯರಿದ್ದರು. ಹಿರಿಯ ಹೆಂಡತಿಯ ಮೊದಲನೇ ಮಗನಾಗಿ ಶ್ರೀ ವಿಶ್ವನಾಥ ಪ್ರತಾಪ ಸಿಂಗರು ದಿನಾಂಕ 25-6-1931ರಲ್ಲಿ ಜನ್ಮವೆತ್ತಿದರು. ಇವರ ತಮ್ಮನೇ ಸಿ.ಎಸ್.ಪಿ. ಸಿಂಗ್ ಎಂಬುವವರು. ಅವರು ಅಲಹಾಬಾದ್ ಹೈಕೋರ್ಟಿನ ಜಡ್ಜರಾಗಿದ್ದರು. ಈಗ್ಗೆ ಕೆಲವು ವರ್ಷಗಳ ಹಿಂದೆ ಶಿಕಾರಿಗೆ ಹೋಗಿದ್ದಾಗ ಡಕಾಯಿತನೊಬ್ಬನ ಗುಂಡಿಗೆ ಬಲಿಯಾಗಿ ಮೃತರಾದರು. ಆಗ್ಗೆ ಶ್ರೀ ವಿ. ಪಿ. ಸಿಂಗರು ಉತ್ತರ ಪ್ರದೇಶದ ಮುಖ್ಯಮಂತ್ರಿಗಳಾಗಿದ್ದರು. ದಯಾ ಸಂಸ್ಥಾನದ ರಾಜನ ಎರಡನೇ ಹೆಂಡತಿಯ ಹೊಟ್ಟೆಯಲ್ಲಿ 3 ಜನ ಗಂಡು ಮಕ್ಕಳು ಜನಿಸಿದರು. ಇವರೇ ಸಂತ ಬಕ್ಸ್, ಹರಬಕ್ಸ್, ಮತ್ತು ರಾಜೇಂದ್ರ ಸಿಂಗರು. ಈ ಮನೆತನದವರು ಕನೂಜಿನ ಪ್ರತಿಷ್ಠಿತ ಜಯಚಂದನ ರಾಜ ವಂಶೀಕರು. ದಯಾ ಸಂಸ್ಥಾನದ ವಾರ್ಷಿಕ ಉತ್ಪನ್ನ (ಬ್ರಿಟಿಷರ ಕಾಲದಲ್ಲಿ) ಸುಮಾರು ಮೂವತ್ತು ಲಕ್ಷ. ಇದೊಂದು ಸುಖ ಸಂಸಾರದ ರಾಜವಂಶವಾಗಿತ್ತು.

ಹಿರಿಯ ಮಗನಾದ ಪ್ರತಾಪ್ ಸಿಂಗ್‌ರಿಗೆ 5 ವರ್ಷವಿದ್ದಾಗ ಅವರನ್ನು ನೆರೆಯ ಇನ್ನೊಂದು ಸಣ್ಣ ಸಂಸ್ಥಾನದ ಮಾಂಡ ಎಂಬ ರಾಜನಿಗೆ ದತ್ತು ಕೊಟ್ಟರು. ಮಾಂಡ ರಾಜನು ಮತ್ತು ದಯಾ ರಾಜನೂ, ಸಂಬಧೀಕರು. ಮಾಂಡರಾಜನಿಗೆ ಪುತ್ರ ಸಂತಾನ ಇಲ್ಲದಿಲ್ಲವಾಗಿ ನೋಡುವುದಕ್ಕೆ, ಲಕ್ಷಣವಾಗಿ, ಚೈತನ್ಯದ ಚಿಲುಮೆಯಾಗಿದ್ದ ವಿ. ಪಿ. ಸಿಂಗ್‌ರನ್ನು ಮಾಂಡ ರಾಜನು ದತ್ತು ಪುತ್ರನನ್ನಾಗಿ ಸ್ವೀಕರಿಸಿ, ಅವನ ಪೋಷಣೆಗೆ ಐರೋಪ್ಯರಾದ ಕುಕ್ ದಂಪತಿಗಳನ್ನು ನೇಮಿಸಿದನು. ಅಲ್ಲದೆ ಅಮರ್‌ಸಿಂಗ್ ಮಾಥೂರ್ ಎಂಬುವವರು ಈ ರಾಜ-

ಕುಮಾರನ ಗಾರ್ಡಿಯನ್ ಆಗಿ ನೇಮಕವಾದರು. ಮಾಂಡ ರಾಜನಿಗೆ ಕ್ಷಯ ರೋಗವಿತ್ತು. ಆತನು 1941ರಲ್ಲಿ ತೀರಿಕೊಂಡನು. ಮಾಂಡಗಾದಿಗೆ ಕಣ್ಣು ಹಾಕಿದ್ದ ರಾಜನ ದಾಯಾದಿಗಳು, ವಿ. ಪಿ. ಸಿಂಗ್‌ರನ್ನು ಕೊಲೆ ಮಾಡುವ ಸಂಚು ನಡೆಸಿದರು. ಆದ್ದರಿಂದ ರಾಜಕುಮಾರನ ಆತ್ಮ ರಕ್ಷಣೆಗೆ ಬಂದೂಕದಾರಿಗಳನ್ನು ರಕ್ಷಣೆಗೆ ನೇಮಿಸಬೇಕಾಯಿತು.

ವಿ.ಪಿ ಸಿಂಗರು ಡೆಹ್ರಾಡನ್ನಿನ ಕರ್ನಲ್ ಬ್ರೌನ್ ಕಾನ್ವೆಂಟಿನಲ್ಲಿಯೂ, ಅನಂತರ ಗಂಡುಮಕ್ಕಳ ಪ್ರೌಢಶಾಲೆಯಲ್ಲಿಯೂ ವಿದ್ಯಾಭ್ಯಾಸ ಮಾಡಿದ ಮೇಲೆ ವಾರಣಾಸಿಯ ಉದಯ ಪ್ರತಾಪ್ ಕಾಲೇಜನ್ನು ಸೇರಿದರು. ಬಿಂಗ ಮಹಾರಾಜರು ಠಾಕುರ್ ವಂಶವ ಶ್ರೀಮಂತ ಮಕ್ಕಳು ಪ್ರತ್ಯೇಕವಾಗಿ ವಿದ್ಯಾಭ್ಯಾಸ ಮಾಡಲೆಂಬ ಉದ್ದೇಶದಿಂದ ಉದಯಪ್ರತಾಪಕಾಲೇಜನ್ನು ಸ್ಥಾಪಿಸಿದ್ದರು. ಅಲ್ಲಿ ಇಂಗ್ಲೀಷ್, ಹಿಂದಿ ಭಾಷೆಯಲ್ಲಿ ಉತ್ತಮ ಶಿಕ್ಷಣ ದೊರಕುತ್ತಿತ್ತು. ವಿಜಯ ಶಂಕರ್ ಎಂಬ ಹಿಂದಿ ವಿದ್ವಾಂಸರು ವಿ. ಪಿ. ಸಿಂಗರ ಗುರುಗಳಾಗಿ ಪಾಠಹೇಳಿಕೊಡುತ್ತಿದ್ದರು. ರಾಜವಂಶದ ಸಿಂಗ್ ಎಂಬುವರು ಗಣಿತದ ಅಧ್ಯಾಪಕರಾಗಿದ್ದರು. ಈ ರೀತಿ ಉತ್ತಮ ಶಿಕ್ಷಣ ದೊರೆತದ್ದರಿಂದ ವಿ.ಪಿ. ಸಿಂಗರು ತಮ್ಮ ಕ್ಲಾಸಿನಲ್ಲಿ ಯಾವಾಗಲೂ ಮೊದಲ ರ‍್ಯಾಂಕನ್ನು ಗಳಿಸಲು ಸಾಧ್ಯವಾಯಿತು. ಮೇಲಾಗಿ ಅವರು ಚರ್ಚಾಕೂಟಗಳಲ್ಲಿ ತಪ್ಪದೇ ಭಾಗವಹಿಸುತ್ತಾ ಅನೇಕ ಪಾರಿತೋಷಕಗಳನ್ನು ಪಡೆದರು. ಅನಂತರ ಅಲಹಾಬಾದ್ ವಿಶ್ವವಿದ್ಯಾನಿಲಯದಲ್ಲಿ 1950ರಲ್ಲಿ ಮೊದಲನೇದರ್ಜೆಯಲ್ಲಿ ಎಲ್.ಎಲ್.ಬಿ. ಪದವೀಧರರಾದರು. ಮಾಂಡರಾಜರಿಗೆ ಸೇರಿದ "ಐಷಮಹಲ್"ಎಂಬ ಅಲಹಾಬಾದ್‌ನ ಅರಮನೆಯಲ್ಲಿ ವಾಸವಿದ್ದು ತಮ್ಮ ವಿದ್ಯಾಭ್ಯಾಸವನ್ನು ಪೂರೈಸಿದರು.

ವಿ. ಪಿ. ಸಿಂಗ್ ಮತ್ತು ಇವರ ತಮ್ಮ ಸಂತ ಬಕ್ಸ್, ವಿದ್ಯಾರ್ಥಿಯಾಗಿದ್ದಾಗ ಅವರ ಊರಾದ ದಯಾದಲ್ಲಿ ಒಂದು ಇಂಗ್ಲೀಷ್ ಶಾಲೆಯನ್ನು ಸ್ಥಾಪಿಸಿ ಇಬ್ಬರೂ ವಿದ್ಯಾರ್ಥಿಗಳಿಗೆ ಪಾಠ ಹೇಳಿಕೊಡುತ್ತಿದ್ದರು. ವಿದ್ಯಾರ್ಥಿಗಳು ಇವರನ್ನು ರಾಜ ಸಾಹೇಬ ಎಂದು ಸಂಬೋಧಿಸುತ್ತಿದ್ದರು. ಆದರೆ, ವಿ. ಪಿ. ಸಿಂಗ್‌ರವರಿಗೆ ಈ ರೀತಿ ಕರೆಸಿಕೊಳ್ಳುವುದು ಇಷ್ಟವಿರಲಿಲ್ಲ " ಮಾಸ್ಟರ್ ಜಿ" ಎಂದು ಕರೆಯುವಂತೆ ವಿದ್ಯಾರ್ಥಿಗಳಿಗೆ ತಿಳಿಸಿ, ವಿದ್ಯಾರ್ಥಿಗಳ ಪುಸ್ತಕ, ಬಟ್ಟೆ ಬರೆಗಾಗಿ ಹಣ ನೀಡುತ್ತಿದ್ದರು. ವಿ.ಪಿ ಸಿಂಗ್ ಮತ್ತು ಅವರ ಸಹೋದರರಿಗೆ ಚಿಕ್ಕಂದಿನಲ್ಲಿ ಕಾಡು ಪ್ರಾಣಿಗಳ ಶಿಕಾರಿ ಹುಚ್ಚು ತುಂಬಾ ಇತ್ತು. ಅನೇಕ ಹುಲಿ ಮತ್ತು ಚಿರತೆಗಳು ವಿ. ಪಿ. ಸಿಂಗರ ಬಂದೂಕಿಗೆ ಬಲಿಯಾಗಿದ್ದವು. ಪ್ರಾಣಿಗಳು ಸಾಯುವಾಗ ಒದ್ದಾಡುವುದನ್ನು, ಅವುಗಳ ರಕ್ತ ಕಾರುವುದನ್ನು ನೋಡಿ ಪಿ. ವಿ. ಸಿಂಗ್‌ರಿಗೆ ತುಂಬಾ ವ್ಯಥೆಯಾಗಿ ಅವರು ಪ್ರಾಣಿಗಳ ಬೇಟೆಯಾಡುವುದನ್ನು ನಿಲ್ಲಿಸಿದರು.

ವಿ. ಪಿ. ಸಿಂಗರು ಕಾನೂನು ಪದವೀಧರರಾದರು. ವಕೀಲಿ ವೃತ್ತಿಯನೇನು ಕೈಗೊಳ್ಳಲಿಲ್ಲ. ಇವರಿಗೆ ಹಣ ಗಳಿಸುವ ಉದ್ದೇಶ ಎಂದೂ ಇರಲೇಇಲ್ಲ. ಇವರು "ಷೆವರ್ಲೆ" ಕಾರಿನಲ್ಲಿ ತಿರುಗಾಡುತ್ತಿದ್ದರು ಯಾವಾಗಲೂ ಜನಸಾಮಾನ್ಯರೊಡನೆ ಬೆರೆಯುತ್ತ ಅವರ ಕಷ್ಟಸುಖಗಳಲ್ಲಿ ಭಾಗಿಯಾಗುತ್ತಿದ್ದರು.

1955 ರಲ್ಲಿ ದೇವಘರ್ ಸಂಸ್ಥಾನದ ರಾಜಕುಮಾರಿ ಸೀತಾ ಎಂಬುವವರೊಡನೆ ವಿ.ಪಿ. ಸಿಂಗರ ವಿವಾಹವಾಯಿತು. ಆಗ ವಿ.ಪಿ ಸಿಂಗರಿಗೆ 24 ವರ್ಷ ವಯಸ್ಸು. ಸೀತಾಕುಮಾರಿಗೆ 18 ವರ್ಷ ವಯಸ್ಸು. ದೇವಘರ್ ಸಂಸ್ಥಾನದವರು ಉದಯಪುರದ ರಾಣಾ ಪ್ರತಾಪ್‌ಸಿಂಗ್ ಅವರ ವಂಶಜರು. ಇದು ರಾಜಸ್ಥಾನದಲ್ಲಿಯೇ ತುಂಬಾ ಪ್ರತಿಷ್ಠಿತವಾದ ರಾಜವಂಶ. ಆದ್ದರಿಂದಲೇ ಸೀತಾಕುಮಾರಿಯಲ್ಲಿ ಆ ವಂಶದ ಘನತೆಗೆ ತಕ್ಕಂತಹ ಉದಾತ್ತ ಗುಣಗಳನ್ನು ಕಾಣಬಹುದು. ಸೀತಾಕುಮಾರಿಯು ಸಹ ಅಜ್ಮೀರದ ಹೆಸರಾಂತ ಸೋಫಿಯಾ ಕಾನ್ವೆಂಟಿನಲ್ಲಿ ವಿದ್ಯಾಭ್ಯಾಸ ಮಾಡಿದವರು. ಇಂತಹ ಅನುರೂಪಳಾದ, ಪತ್ನಿಯನ್ನು ಪಡೆದಿದ್ದು ವಿ.ಪಿ. ಸಿಂಗರ ಅದೃಷ್ಟವೆಂದೇ ಹೇಳಬಹುದು. ಮದುವೆಯಾದ ಮೇಲೆ ಸೀತಾಕುಮಾರಿ ಸಹ ತನ್ನ ಗಂಡನೊಡನೆ ಜನತೆಯ ಸೇವೆಗೆ ಮುಂದಾದರು. ತಾನೇ ಮನೆಕೆಲಸದ ಮೇಲ್ವಿಚಾರಣೆ ನೋಡಿ ಕೊಳ್ಳುತ್ತಿದ್ದಲ್ಲದೇ ಅಡಿಗೆಯನ್ನು ಸಹ ಸೊಗಸಾಗಿ ಮಾಡಬಲ್ಲವರಾದರು. ಇವರ ಹಿರಿಯ ಪುತ್ರ ಅಜೆಯಸಿಂಗನ ಜನನ 1957ರಲ್ಲಾಯಿತು. ಈತನ ತಮ್ಮ ಅಭಯ ಸಿಂಗನು 1958ರಲ್ಲಿ ಜನ್ಮವೆತ್ತಿದನು. ಸೀತಾಕುಮಾರಿ-ವಿ.ಪಿ. ಸಿಂಗರಿಗೆ ಇವರಿಬ್ಬರೇ ಮಕ್ಕಳು. ಅಜೆಯಸಿಂಗನು ಚಾರ್ಟರ್ಡ್ ಅಕೌಂಟೆಂಟ್ ಆಗಿದ್ದನು. ಅನಂತರ ಅಮೇರಿಕಾದ ಬ್ಯಾಂಕೊಂದರಲ್ಲಿ ಕೆಲಸಕ್ಕೆ ಇದ್ದನು. ಈಚೆಗೆ ಅದನ್ನು ಸಹ ಬಿಟ್ಟು ದೆಹಲಿಯಲ್ಲಿದ್ದಾನೆ ಕಿರಿ ಮಗ ಅಭಯಸಿಂಗನು ಡಾಕ್ಟರ್ ಆಗಿದ್ದಾನೆ. ಅಜೆಯ ಸಿಂಗನು ತನ್ನ ಆಸ್ತಿಯನ್ನು ಘೋಷಣೆ ಮಾಡಿಕೊಂಡು ಆಪಾದನೆ ನಡೆಸುತ್ತಿದ್ದ ಕಾಂಗ್ರೆಸ್ಸಿನವರಿಗೆ ಉತ್ತರ ನೀಡಿದ್ದಾನೆ.

ವಿ. ಪಿ. ಸಿಂಗರು ಹಿಂದಿಯಲ್ಲಿ ಸೊಗಸಾಗಿ ಕವಿತೆಗಳನ್ನು ರಚಿಸಬಲ್ಲರು. ಅಂತೆಯೇ ಉತ್ತಮ ಚಿತ್ರಕಲಾವಿದರು. ಅನೇಕ ವರ್ಣಚಿತ್ರಗಳನ್ನು ಬಿಡಿಸಿ ಹೆಸರು ಗಳಿಸಿದ್ದಾರೆ. ಪತ್ನಿ ಸೀತಾ ಕುಮಾರಿಯು ಸಹ ಜೀವನದಲ್ಲಿ ಉತ್ತಮ ಅಭಿರುಚಿಯನ್ನು ಬೆಳಸಿಕೊಂಡು ಸರಳತೆಗೆ ಇನ್ನೊಂದು ಹೆಸರಾಗಿದ್ದಾರೆ. ಇವರು ಮಂಗಳ ಸೂತ್ರವನ್ನು ಬಿಟ್ಟರೆ ಬೇರೆ ಯಾವ ಚಿನ್ನ - ಆಭರಣವನ್ನು ಧರಿಸುವುದಿಲ್ಲ. ತುಂಬಾ ನಿಗರ್ವಿ.

## ವಿ. ಪಿ. ಸಿಂಗರ ದಿನಚರಿ

ಇವರು ಬೆಳಿಗ್ಗೆ ಸುಮಾರು 7.00 ಘಂಟೆಗೆ ಏಳುತ್ತಾರೆ ಯೋಗಾಸನ ಮಾಡುತ್ತಾರೆ. ಸ್ನಾನವಾದ ಮೇಲೆ ಇಂಗ್ಲಿಷ್, ಹಿಂದಿ, ದಿನಪತ್ರಿಕೆಗಳನ್ನು ಓದುತ್ತಾರೆ. ಉಪಹಾರ ಪೂರೈಸಿದ ಮೇಲೆ ತಮ್ಮ ಕೆಲಸದಲ್ಲಿ ತೊಡಗುತ್ತಾರೆ. ಇವರು ಸದಾ ಸಾರ್ವಜನಿಕ ಕೆಲಸಗಳಲ್ಲಿ ನಿರತರಾಗಿರುವುದರಿಂದಲೂ, ರಾಜಕೀಯದಲ್ಲಿರುವುದರಿಂದಲೂ, ಇವರಿಗೆ ಬಿಡುವೆಂಬುದೇ ಇಲ್ಲ. ಸದಾ ಜನ ಜಂಗುಳಿ ಇವರ ಬಳಿ ಇದ್ದೇ ಇರುತ್ತದೆ. ಎಲ್ಲರ ಸಮಸ್ಯೆಗಳನ್ನು ಸಾವಧಾನದಿಂದ ಕೇಳುತ್ತಾರೆ. ಪರಿಹಾರಕ್ಕೆ ಪ್ರಯತ್ನಿಸುತ್ತಾರೆ. ಕ್ಲುಪ್ತ ವೇಳೆಯಲ್ಲಿ ಇವರಿಗೆ ಊಟ ಮಾಡಲು ಆಗುವುದೇ ಇಲ್ಲ. ಇವರ ಪತ್ನಿಯು ಮೇಜಿನ ಮೇಲೆ ಜೋಡಿಸಿಟ್ಟ ಆಹಾರವನ್ನು ಬಿಡುವಾದ ವೇಳೆಯಲ್ಲಿ ಹೋಗಿ ಊಟ ಮಾಡುತ್ತಾರೆ. ಕೆಲವೊಮ್ಮೆ ರಾತ್ರಿ 12.00 ಗಂಟೆಯ ವರೆಗೆ ಇವರಿಗೆ ಊಟ ಮಾಡಲು ಪುರುಸೊತ್ತು ಸಿಗುವುದಿಲ್ಲ. ಆದರೂ ಬೇಸರ ಪಟ್ಟುಕೊಳ್ಳದೆ ಪ್ರಸನ್ನ ಚಿತ್ತರಾಗಿಯೇ ಕೆಲಸ ಮಾಡುತ್ತಿರುತ್ತಾರೆ. ಇವರಿಗೆ ರೇಡಿಯೋ ಕೇಳುವ ಅಥವಾ ಟಿ ವಿ.ಯನ್ನು ನೋಡುವ ಆಸಕ್ತಿ ಇಲ್ಲವೇ ಇಲ್ಲ. ಇದಕ್ಕೆ ಇವರಿಗೆ ಅವಕಾಶವೂ ಸಿಗುವುದಿಲ್ಲ.

ವಿ.ಪಿ. ಸಿಂಗರಿಗೆ ವಿನೋಬಭಾವೆಯವರಲ್ಲಿ ತುಂಬಾ ಭಕ್ತಿಗೌರವವಿತ್ತು. ಅವರ ಭೂದಾನ ಚಳುವಳಿ ಯಜ್ಞ ಇವರ ಮನಸ್ಸಿಗೆ ಬಹಳವಾಗಿ ಹಿಡಿಸಿತು. ಆದ್ದರಿಂದಲೆ ಹಿಂದು-ಮುಂದು ನೋಡದೆ ತಮ್ಮ ಎರಡು ಜಮೀನ್ದಾರಿಗೆ ಸೇರಿದ ಜಮೀನೆಲ್ಲವನ್ನು ಭೂದಾನಕ್ಕೆ ಧಾರೆ ಎರೆದರು. ಅಲ್ಲಿನ ರೈತರು ಯಾವ ಪರಿಹಾರವನ್ನು ಕೊಡದೆ ತಾವು ಸಾಗು ಮಾಡುತ್ತಿದ್ದ ಜಮೀನಿನ ಒಡೆಯರಾದರು. ವಿನೋಭಭಾವೆಯವರೆ ವಿ.ಪಿ. ಸಿಂಗರ ಮನೆತನಕ್ಕೆ ಸ್ವಲ್ಪ ಜಮೀನು ಇರಲೆಂದು ಜಹಗೀರಿಯ ಒಂದು ಭಾಗವನ್ನು ಬಿಟ್ಟು ಕೊಟ್ಟರು. ಅದನ್ನು ಸಹ ವಿ ಪಿ. ಸಿಂಗರು ವಿದ್ಯಾಶಾಲೆಗಳಿಗೆ ಬರೆದರು. ಇವರ ಜಮೀನ್ದಾರಿಯ ಭೂಮಿಯೆಲ್ಲಾ ರೈತರಿಗೆ ಪುಕ್ಕಟ್ಟೆಯಾಗಿ ದೊರೆತವು. ಕೆಲವು ಕಟ್ಟಡ ಮತ್ತು ನಿವೇಶನಗಳನ್ನು ಸರ್ಕಾರದವರು ವಶಪಡಿಸಿ ಕೊಂಡಿದ್ದಕ್ಕೆ ಮಾತ್ರ ವಿ ಪಿ. ಸಿಂಗರಿಗೆ ಸುಮಾರು ಏಳುವರೇ ಲಕ್ಷ ರೂಪಾಯಿಗಳ ಸರ್ಕಾರದಿಂದ ಪರಿಹಾರಧನ ಸಿಕ್ಕಿದೆ. ಇವರ ಸಂಸಾರ ನಿರ್ವಹಣೆಗೆ ಇದೇ ಮೂಲ ಧನ. ಸೌಜನ್ಯಶಾಲಿಗಳಾದ ವಿ.ಪಿ. ಸಿಂಗರು ತಮ್ಮ ನಡೆ, ನುಡಿ, ವ್ಯವಹಾರಗಳಲ್ಲಿ ಸರಳ ಮಾರ್ಗವನ್ನು ಅನುಸರಿಸಿ, ಜನತೆಯ ಹೃದಯವನ್ನು ಗೆದ್ದರು. ಜಯ ಪ್ರಕಾಶರ ಉದಾತ್ತ ಧ್ಯೇಯ, ರಾಷ್ಟ್ರಪ್ರೇಮ, ತ್ಯಾಗಮಯ ಜೀವನ; ರಾಮ ಮನೋಹರ ಲೋಹಿಯ ಅವರ ಸಮಾಜವಾದ, ಲಾಲ್‌ಬಹದ್ದೂರ್ ಶಾಸ್ತ್ರಿರವ

ಪ್ರಾಮಾಣಿಕತೆ ಇವುಗಳು ಇವರಿಗೆ ತುಂಬಾ ಮೆಚ್ಚುಗೆಯಾದವು. ಲಾಲ್‌ಬಹದ್ದೂರ ಶಾಸ್ತ್ರಿಯವರೇ ಇವರಿಗೆ ರಾಜಕೀಯ ಗುರುಗಳಾದರು. ಆದ್ದರಿಂದಲೇ ವಿಶ್ವನಾಥ ಪ್ರತಾಪ್ ಸಿಂಗರು ತಮಗೆ ಸೇರಿದ್ದ ಅಲಹಾಬಾದಿನಲ್ಲಿದ್ದ ಮಾಂಡ ಅರಮನೆಯಲ್ಲಿ ಲಾಲ್‌ಬಹದ್ದೂರ ಶಾಸ್ತ್ರಿಅವರ ನಾಮಾಂಕಿತದಲ್ಲಿ "ಲಾಲ್‌ಬಹದ್ದೂರ ಶಾಸ್ತ್ರಿ ಸೇವಾ ನಿಕೇತನ, ಎಂಬ ಸಂಸ್ಥೆಯನ್ನು ನಡೆಸಲು, ಏರ್ಪಡಿಸಿರುವುದು. ಹೀಗೆ ಇವರು ಬೆಲೆಬಾಳುವ ಅರಮನೆಯನ್ನೇ ಯೋಗ್ಯ ಕಾರ್ಯಕ್ಕೆ ದಾನ ಮಾಡಿದರೂ ಸಹ ಆ ಬಗ್ಗೆ ಪ್ರಚಾರ ಮಾಡಿಸಿಕೊಳ್ಳಲು ಇವರಿಗೆ ಇಷ್ಟವಿಲ್ಲ.

ವಿ.ಪಿ. ಸಿಂಗರು 1967ರಲ್ಲಿ ಸ್ವಲ್ಪಕಾಲ ದೆಹಲಿಯಲ್ಲಿ ಸ್ಥಿರ ಆಸ್ತಿಗಳನ್ನು ಕೊಳ್ಳುವ ಮತ್ತು ಮಾರಾಟ ಮಾಡವ ದಂಧೆಯಲ್ಲಿದ್ದರು. ಅದರಲ್ಲಿ ಸ್ವಲ್ಪ ಹಣ ಸಂಗ್ರಹವಾಗಿ ಇವರ ಮಕ್ಕಳ ವಿದ್ಯಾಭ್ಯಾಸಕ್ಕೂ, ರಾಜಕೀಯ ಪ್ರವೇಶಿಸಲು ಅವಕಾಶ ಸಿಕ್ಕಿತು. 1967ರಲ್ಲಿ ಇವರ ಸಹೋದರ ಸಂತ್‌ಬಕ್ಸ್‌ನು ಫತೇಪುರ ಕ್ಷೇತ್ರ ದಿಂದ ಲೋಕಸಭೆಗೆ ಆರಿಸಿ ಬಂದರು. 1969ರಲ್ಲಿ ವಿ.ಪಿ. ಸಿಂಗರು ಕಾಂಗ್ರೆಸ್ ಟಿಕೇಟಿನ ಮೇಲೆ ಉತ್ತರ ಪ್ರದೇಶದ ವಿಧಾನಸಭೆಗೆ ಪ್ರವೇಶಿಸಿದರು. 1971ರಲ್ಲಿ ಇವರು ಮತ್ತು ಸಂತ್‌ಬಕ್ಸ್‌ರು ಇಬ್ಬರು ಲೋಕಸಭಾ ಸದಸ್ಯರಾದರು. ಅಲಹಾಬಾದ್ ಜಿಲ್ಲೆಯ ಫುಲ್ ಪುರ್ ಕ್ಷೇತ್ರದಿಂದ ಲೋಕಸಭೆಗೆ ಆರಿಸಿ ಬಂದಿದ್ದ ವಿ.ಪಿ. ಸಿಂಗ್‌ರವರನ್ನು ಅಖಿಲ ಭಾರತ ಕಾಂಗ್ರೆಸ್ ಅಧ್ಯಕ್ಷರಾಗಿದ್ದ ದೇವಕಾಂತ ಬರುವ ಅವರ ಶಿಫಾರಸ್ಸಿನ ಮೇಲೆ ಪ್ರದಾನಿಯಾಗಿದ್ದ ಇಂದಿರಾಗಾಂಧಿಯವರು ತಮ್ಮ ಮಂತ್ರಿ ಮಂಡಲದಲ್ಲಿ ಡೆಪ್ಯೂಟಿ ಕಾಮರ್ಸ್ ಮಿನಿಸ್ಟರ್ ಆಗಿ ತೆಗೆದು ಕೊಂಡರು. ಉತ್ತರ ಪ್ರದೇಶದ ರಾಜಕಾರಣದಲ್ಲಿ ಬಲಿಷ್ಟ ವ್ಯಕ್ತಿಯಾಗಿರುವ ಕಮಲಾಪತಿ ತ್ರಿಪಾಠಿ ಯವರು ವಿ.ಪಿ. ಸಿಂಗರು ಡೆಪ್ಯೂಟಿ ಮಂತ್ರಿಗಳಾಗುವುದಕ್ಕೆ ಅಡ್ಡ ಬಂದಿದ್ದರು. ಆದರೆ ಇಂದಿರಾಗಾಂಧಿಯವರು ತ್ರಿಪಾಠಿಯವರ ಮಾತನ್ನು ತಿರಸ್ಕರಿಸಿ ವಿ. ಪಿ. ಸಿಂಗರನ್ನು ರಾಜಕೀಯವಾಗಿ ಬೆಳೆಸಲು ಮನಸ್ಸು ಮಾಡಿದರು. ಠಾಕೂರ್ ಜಾತಿಯ ದಿನೇಶ್ ಸಿಂಗರ ಪ್ರಾಬಲ್ಯವನ್ನು ಉತ್ತರ ಪ್ರದೇಶದಲ್ಲಿ ಮುರಿಯಲು ಪ್ರತಿಭಾವಂತ ನಾದ ಇನ್ನೊಬ್ಬ ಠಾಕೂರನು ಇಂದಿರಾಗಾಂಧಿಯವರಿಗೆ ಬೇಕಾಗಿದ್ದುದೇ ಇದಕ್ಕೆ ಕಾರಣವಾಗಿತ್ತು. 1977ರ ಚುನಾವಣೆಯಲ್ಲಿ ತುರ್ತು ಪರಿಸ್ಥಿತಿ ತಂದಿದ್ದರ ಫಲವಾಗಿ ಇಂದಿರಾಗಾಂಧಿಯವರು ತಕ್ಕ ಬೆಲೆಯನ್ನು ತೆತ್ತುದಲ್ಲದೆ ಅವರ ಅನುಯಾಯಿಗಳು ಹೀನಾಯವಾದ ಸೋಲನ್ನು ಅಪ್ಪಿದರು. ಆಗ ವಿ.ಪಿ. ಸಿಂಗ್‌ರವರು ಲೋಕಸಭಾ ಚುನಾವಣೆಯಲ್ಲಿ ಸೋತರು. ಜನತಾ ಸರ್ಕಾರ ಅಧಿಕಾರ ಬಂದ ಮೇಲೆ ವಿ.ಪಿ. ಸಿಂಗರನ್ನು ಮೂರು ಸಾರಿ ಅರೆಸ್ಟ್ ಮಾಡಲಾಯಿತು. ಇವರನ್ನು ನೈನಿಟಾಲ್‌ನಲ್ಲಿ ಇಡಲಾಗಿತ್ತು. ಹೀಗೆ ಇವರು ತಮ್ಮ ಜೀವನದಲ್ಲಿ ಸಿಹಿ - ಕಹಿಗಳೆಲ್ಲವನ್ನು ಅನುಭವಿಸಿದ್ದಾರೆ.

ಕೇಂದ್ರವನ್ನು ಜನತಾ ಸರ್ಕಾರ ಮತ್ತು ಚರಣಸಿಂಗ್ ಸರ್ಕಾರ ಪತನವಾದ ಮೇಲೆ ಇಂದಿರಾಗಾಂಧಿಯವರೊಡನೆ ವಿ. ಪಿ. ಸಿಂಗರೂ ಲೋಕಸಭೆಗೆ ಆಯ್ಕೆಯಾದರು. ಅನಂತರ ಇಂದಿರಾ ಗಾಂಧಿಯವರ ಸಲಹೆ ಮೇಲೆ ವಿ ಪಿ. ಸಿಂಗ್‌ರವರು ಉತ್ತರ ಪ್ರದೇಶದ ಮುಖ್ಯಮಂತ್ರಿಗಳಾದರು. ಸುಮಾರು 2 ವರ್ಷಗಳ ಕಾಲ ಮುಖ್ಯ ಮಂತ್ರಿ ಕೆಲಸವನ್ನು ದಕ್ಷತೆಯಿಂದಲೂ. ಪ್ರಾಮಾಣಿಕತೆಯಿಂದಲೂ, ನಡೆಸಿ 1982ರ ಜೂನ್ ತಿಂಗಳಲ್ಲಿ ಮುಖ್ಯ ಮಂತ್ರಿ ಪದವಿಗೆ ರಾಜೀನಾಮೆ ಇತ್ತರು. ಏಳು ತಿಂಗಳ ನಂತರ ಪುನಃ ಕೇಂದ್ರದಲ್ಲಿ ಕಾಮರ್ಸ್ ಮಂತ್ರಿಯಾಗಿ ಇಂದಿರಾಗಾಂಧಿಯವರಿಂದ ನೇಮಕ ಹೊಂದಿದರು. ರಾಜ್ಯಸಭೆಯ ಸದಸ್ಯರೂ ಆದರು. 1984ರಲ್ಲಿ ಇಂದಿರಾಗಾಂಧಿಯವರ ಹತ್ಯೆಯಾದ ಮೇಲೆ ಇವರು ಉತ್ತರ ಪ್ರದೇಶದ ಸಮಿತಿಯ ಅಧ್ಯಕ್ಷರಾಗಿ 1984ರ ಲೋಕಸಭಾ ಚುನಾವಣೆಯಲ್ಲಿ ಉತ್ತರ ಪ್ರದೇಶದಲ್ಲಿ 85 ಸೀಟಿಗೆ 83 ಲೋಕಸಬಾ ಸೀಟನ್ನು ಗೆದ್ದು ಕೊಟ್ಟರು. ಆಗ ಅಮೇಥಿಯಿಂದ ರಾಜೀವಗಾಂಧಿಯವರು ಲೋಕಸಭೆಗೆ ಪ್ರಚಂಡ ಬಹುಮತದಿಂದ ಆರಿಸಿ ಬಂದರು. ರಾಜೀವಗಾಂದಿಯವರು ತಮ್ಮ ಮಂತ್ರಿ ಮಂಡಲದಲ್ಲಿ ವಿ.ಪಿ ಸಿಂಗರನ್ನು ಹಣಕಾಸಿನ ಸಚಿವರನ್ನಾಗಿ ನೇಮಿಸಿಕೊಂಡರು. ಇವರು ಲೋಕಸಭೆಯಲ್ಲಿ ಮಂಡಿಸಿದ ಪ್ರಥಮ ಆಯವ್ಯಯವು ಹಣಕಾಸು ಹಾಗೂ ಕಾನೂನು ತಜ್ಞರಾದ ಪಾಲ್ಕಿವಾಲಂತಹ ತಜ್ಞರ ಮೆಚ್ಚುಗೆಗೆ ಪಾತ್ರವಾಯಿತೆಂದ ಮೇಲೆ ವಿ. ಪಿ. ಸಿಂಗರ ಜಾಣಾಕ್ಷತನ ಆಡಳಿತದ ಅನುಭವಗಳನ್ನು ಅರ್ಥ ಮಾಡಿಕೊಳ್ಳ ಬಹುದು. ಬಂಡವಾಳಶಾಹಿಗಳು ಶೋಷಣೆ ಮತ್ತು ತೆರಿಗೆಗಳನ್ನು ತಪ್ಪಿಸಿಕೊಳ್ಳಲು ಹೂಡುತಿದ್ದಾ ಹುನ್ನಾರುಗಳನ್ನೆಲ್ಲಾ ಚೆನ್ನಾಗಿ ಅಭ್ಯಾಸ ಮಾಡಿ ರಾಷ್ಟ್ರದ ಬೊಕ್ಕಸಕ್ಕೆ ಕನ್ನ ಹಾಕುತ್ತಿದ್ದ ಖದೀಮರನ್ನು ಮಟ್ಟಹಾಕಲು ವಿ.ಪಿ. ಸಿಂಗರು ನಿರ್ಧರಿಸಿದರು. ಅದು ಇವರಿಗೆ ತೊಂದರೆ ತಂದಿತು. ಆದುದರಿಂದ ವಿ.ಪಿ. ಸಿಂಗರು ಸಚಿವ ಸ್ಥಾನಕ್ಕೆ ರಾಜೀನಾಮೆ ಇತ್ತು ಹೊರಬರಬೇಕಾಯಿತು.

ವಿ ಪಿ. ಸಿಂಗ್, ದೇವಿಲಾಲ್. ರಾಮಕೃಷ್ಣ ಹೆಗ್ಗಡೆ. ಮಧುದಂಡವತೆ, ಎನ್.ಟಿ. ರಾಮರಾವ್ ಜ್ಯೋತಿಬಸ್ಸು. ಬಿ ಜೆ ಪಾಟ್ನಾಯಿಕ್, ಅಜಿತ್ ಸಿಂಗ್, ಕರುಣಾನಿಧಿ, ಎಲ್.ಕೆ ಅಡ್ವಾನಿ, ವಾಜಪೇಯಿ ಮುಂತಾದ ಅಗ್ರ ನಾಯಕರೆಲ್ಲಾ ಸೇರಿ ರಾಜೀವ್‌ಗಾಂಧಿಯವರ ರಾಜೀನಾಮೆಗೆ ಒತ್ತಾಯಿಸಿದ್ದಲ್ಲದೇ ಕಾಂಗ್ರೆಸ್‌ಗೆ ಪರ್ಯಾಯವಾಗಿ ವಿರೋಧಪಕ್ಷಗಳ ಒಕ್ಕೂಟಕ್ಕೆ ಪ್ರಯತ್ನಿಸಿದ್ದರ ಫಲವಾಗಿ ರಾಜೀವ್‌ಗಾಧಿಯವರು 9ನೇ ಲೋಕಸಭೆಯ ಚುನವಣೆಗಳನ್ನು ಘೋಷಿಸಬೇಕಾಯಿತು. ವಿರೋಧಪಕ್ಷಗಳಲ್ಲಿ ಅತಿದೊಡ್ಡದಾದ ಜನತಾದಳದ ಅಧ್ಯಕ್ಷರಾಗಿ ವಿ.ಪಿ. ಸಿಂಗ್ ಹಾಗೂ ಬಿ.ಜೆ.ಪಿ. ಅಧ್ಯಕ್ಷರಾಗಿ ಎಲ್. ಕೆ. ಅಡ್ವಾನಿ, ಮತ್ತು ಜನತಾದಳದ ಪಾರ್ಲಿಮೆಂಟರಿ ಬೋರ್ಡಿನ ಅಧ್ಯಕ್ಷರಾದ ದೇವಿಲಾಲ್, ಅಜಿತ್‌ಸಿಂಗ್, ಇವರೆಲ್ಲಾ ಸೇರಿ ಹಿಂದಿ ಮಾತನಾಡುವ ಪ್ರದೇಶದಲ್ಲೆಲ್ಲಾ ಕಾಂಗ್ರೆಸ್ಸಿಗೆ ವಿರುದ್ಧವಾಗಿ

ಬಹುತೇಕವಾಗಿ ನೇರಸ್ಪರ್ಧೆ ಏರ್ಪಡುವಂತೆ ಮಾಡಿದ್ದರಿಂದ 1989ನೇ ನವಂಬರ್ ಚುನಾವಣೆಯಲ್ಲಿ ಕಾಂಗ್ರೆಸ್ಸಿಗೆ ಸೋಲಾಗಿ ರಾಷ್ಟ್ರೀಯ ರಂಗವು ಕೇಂದ್ರದಲ್ಲಿ ಅಧಿಕಾರಕ್ಕೆ ಬರಲು ಸಾಧ್ಯವಾಯಿತು. ವಿ.ಪಿ. ಸಿಂಗರು ಪ್ರಧಾನ ಮಂತ್ರಿಗಳಾದರು.

ಅಲ್ಪಮತ ಹೊಂದಿರುವ ರಾಷ್ಟ್ರೀಯ ರಂಗವು ಬಿ.ಜೆ.ಪಿ. ಮತ್ತು ಕಮ್ಯುನಿಸ್ಟ್ ಪಕ್ಷಗಳ ಸದಸ್ಯರ ಬೆಂಬಲ ಪಡೆದು ಸರ್ಕಾರ ನಡೆಸಲು ತುಂಬಾ ಕಸರತ್ತು ಮಾಡಬೇಕಾಗಿದೆ. ಇದು ವಿ. ಪಿ ಸಿಂಗರ ಜಾಣ್ಮೆಗೆ ಒರೆಗಲ್ಲಾಗಿದೆ. ತುಂಬಾ ಸರಳ ಜೀವಿಗಳು, ತ್ಯಾಗ ಜೀವನಕ್ಕೆ, ಪ್ರಾಮಾಣಿಕತೆಗೆ ಹೆಸರಾಗಿ ಜನತೆಯ ಆಶೋತ್ತರಗಳಿಗೆ ಸ್ಪಂದಿಸುವ, ಹಾಗೂ ವರ್ಣಮಯ ವ್ಯಕ್ತಿತ್ವ ಹೊಂದಿರುವ ನೂತನ ಪ್ರಧಾನಿ ವಿ. ಪಿ. ಸಿಂಗರು ಈ ಸಂದಿಗ್ಧ ಸಮಯದಲ್ಲಿ ಎಲ್ಲರ ನಿರೀಕ್ಷೆಗೂ ಮೀರಿ ರಾಷ್ಟ್ರವನ್ನು ಮುನ್ನಡೆಸುವರೆಂಬ ಭರವಸೆ ಅನೇಕರಿಗೆ ಇದೆ ಅವರ ಪೂರ್ವಚರಿತ್ರೆ ಗೊತ್ತಿದ್ದವರಿಗೆ ಇದು ಆಶ್ಚರ್ಯವಾಗಿ ಕಾಣುವುದಿಲ್ಲ. ಇವರು ಯುವಕರಿಗೂ, ರಾಷ್ಟ್ರೀಯ ಅಲ್ಪಸಂಖ್ಯಾತರಿಗೂ ಆಶಾಕಿರಣವಾಗುವುದು ಗೋಚರವಾಗಿದೆ. ಶ್ರೀ ಮುಫ್ತಿ ಮಹಮದ್. ಸೌಯೀದಾರವರನ್ನು ಗೃಹಮಂತ್ರಿಗಳನ್ನಾಗಿ ಮಾಡಿರುವುದು ಅವರ ದೂರದೃಷ್ಟಿಗೆ ನಿದರ್ಶನ.

# ಮಹಿಳೆ ಮತ್ತು ಶಿಕ್ಷಣ

ಎಂ. ವಿ. ನೀಲಾಂಬಿಕೆ,
249, ಉತ್ತರಾದಿಮಠದ ರಸ್ತೆ, ಮೈಸೂರು.

ಇಂದು ನಮಗೆ ಎಂಥ ಶಿಕ್ಷಣ ಬೇಕು? ನಮಗೆ ಸರಿಯಾದ ಶಿಕ್ಷಣ ದೊರ ಕುತ್ತಿಲ್ಲವೆ? ಡಿಗ್ರಿಗಳ ಸರಮಾಲೆ ಹೊತ್ತಿರುವ ಹೆಣ್ಣಿಗೂ ಶಿಕ್ಷಣದ ಅವಶ್ಯಕತೆ ಉಂಟೆ? ಎಂಬ ಪ್ರಶ್ನೆಗಳು ಕಣ್ಮುಂದೆ ಬಂದಾಗ ಇಂದು ಮಹಿಳೆಗೆ ಬೇಕಾಗಿರುವ ಶಿಕ್ಷಣ ಡಿಗ್ರಿ ತೆಗೆದು ಕೊಳ್ಳುವಷ್ಟಕ್ಕೆ ಸೀಮಿತವಲ್ಲ. ಅದಕ್ಕೂ ಮುಂದುವರೆದು 12ನೆ ಶತಮಾನದ ಶರಣೆಯರಿಗೆ ದೊರೆತಿದ್ದ ಶಿಕ್ಷಣ ಇಂದು ಬೇಕು. ಅಂದರೆ ಅಕ್ಕನ ದಿಟ್ಟ ತನ, ಸತ್ಯಕ್ಕನ ನಿಷ್ಠೆ, ಲಕ್ಕಮ್ಮನ ಸಮಾಜಪಾದ ಅಕ್ಕನಾಗಮ್ಮನ ಧೈರ್ಯ ನೀಲಲೋಚನೆ, ಗಂಗಾಂಬೆಯರ ದೂರದೃಷ್ಟಿ, ಬಸವಣ್ಣ ಬೋಧಿಸಿದ ಸಪ್ತ ಸೂತ್ರವನ್ನೊಳಗೊಂಡ ಶಿಕ್ಷಣ ದೊರಕಿದರೆ ಎಂಥ ಭವ್ಯ ಸೌಧವನ್ನಾದರು ನಿರ್ಮಿಸ ಬಹುದು. ಒಳ್ಳೆಯದು ಕೆಟ್ಟದರ ವಿಮರ್ಶಾತ್ಮಕ ಮನೋಭಾವ ತನ್ನ ಸಮಸ್ಯೆಗಳ ಪರಿಹಾರಕ್ಕೆ ಚರ್ಚಿನಡೆಸಲು ಮುಕ್ತವಾತಾವರಣ ನಿರ್ಮಾಣವಾಗ ಬೇಕು. ಇಂಥ ಶೌರ್‍ಯ 12ನೇ ಶತಮಾನದಲ್ಲಿ ದೊರಕಿತ್ತು. ಆ ಶರಣೆಯರ ಜೀವನ ಅವರ ವಚನಗಳು ನಮ್ಮ ಸಮಸ್ಯೆಗೆ ಸೂಕ್ತ ಪರಿಹಾರ ದೊರಕಿಸಕೊಡಬಲ್ಲವು.

ವೀರವಿರಾಗಿಣಿ ಜಂಗಮ ಚಕ್ರಿ ಅಕ್ಕನದಿಟ್ಟತನ ಇಂದು ಮುಖ್ಯವಾಗಿ ಹೆಣ್ಣು ಮಕ್ಕಳಲ್ಲಿ ಪಡಿಮೂಡಬೇಕು. ಏನು ಬಂದರೂ ನಾನು ಹೆದರುವವಳಲ್ಲ ಎಂಬ ಸಾವ ಕೆಡುವ ಗಂಡರನ್ನೊಯ್ದು ಒಲೆಯೊಳಗಿಕ್ಕುವ ಆ ಕೆಚ್ಚು ಇರಬೇಕು. ಇಂದು ಹೆಣ್ಣು ಸ್ವಲ್ಪ ಮೇಲಕ್ಕೇರುವಳೆಂದರೆ ಅವಳನ್ನು ಅಧಃಪತನಕ್ಕೆ ತುಳಿಯುವವರೆ ಹೆಚ್ಚು ಹೆಣ್ಣಿಗೆ ಹೆಣ್ಣೆ ಶತ್ರುವಾಗಿದ್ದಾಳೆ. ಆವಳಿಗೆ ಸಹಕಾರ ನೀಡುತ್ತಿಲ್ಲ. ಹೆಣ್ಣಿನ ನೋವಿಗೆ ಸ್ಪಂದಿಸುವವರಿಲ್ಲ. ಇದರ ಪರಿಣಾಮ ಬೆತ್ತಲೆ ಮೆರವಣಿಗೆ, ಸತಿಪದ್ಧತಿ, ದೇವದಾಸಿ ಪದ್ಧತಿ, ಅತ್ತೆಯ ಹಿಂಸೆ, ಅಗ್ನಿಪರೀಕ್ಷೆಯಲ್ಲಿ ಬೆಂದು ಬೂದಿಯಾಗುವಿಕೆ, ಇವೆಲ್ಲದಕ್ಕೂ ಸಿಲುಕಿ ನಲುಗಿದ್ದಾಳೆ. ಇವನ್ನೆಲ್ಲ ಎದುರಿಸ ಬೇಕಾದರೆ ಅಕ್ಕನ ವಚನಗಳತ್ತ ಕಣ್ಣು ಹಾಯಿಸಬೇಕು. ಅವನ್ನು ಅರ್ಥಮಾಡಿ ಕೊಳ್ಳಬೇಕು. ಜೀವನದಲ್ಲಿ ಅಳವಡಿಸಿ ಕೊಳ್ಳಬೇಕು.

ಶಿಕ್ಷಣವೆಂದರೆ ಶಾಲೆ ಕಾಲೇಜಿಗೆ ಹೋಗಿ ಕಲಿತ ವಿದ್ಯೆ ಮಾತ್ರವಲ್ಲ. ಅವ ಒಂದೊಂದು ದಿನದ ಅನುಭವವೇ ಶಿಕ್ಷಣವಾಗುತ್ತದೆ. ಈ ಶರಣೆಯರು ತಮ ದಿನನಿತ್ಯದ ಅನುಭವವನ್ನು ಸಮಸ್ಯೆಗಳನ್ನು ಪರಿಹರಿಸಿಕೊಳ್ಳಲು ಅನುಭವ ಮಂಟ

ವೆಂಬ ವಿಶ್ವವಿದ್ಯಾನಿಲಯದಲ್ಲಿ ಪ್ರಭುದೇವರೆಂಬ ಕುಲಪತಿಯ ನಿರ್ದೇಶನದಲ್ಲಿ ಯಾವ ಜಾತಿ, ಮತ, ವರ್ಗದ ಸಂಕೋಲೆಯಿಲ್ಲದೆ ಮುಕ್ತಾಮುಕ್ತ ವಿವೇಚಿಸಿ ಜ್ಞಾನ ದೀಪ್ತಿಯನ್ನು ಬೆಳಗಿಸಿಕೊಂಡಿದ್ದರು. ಅವರಲ್ಲಿ ಶಿಖರ ಪ್ರಾಯಳು ಅಕ್ಕಮಹಾದೇವಿ ಅವಳ ನುಡಿ ಜ್ಯೋತಿ ನಮ್ಮ ಬಾಳಿಗೆ ಮಾರ್ಗ ಜ್ಯೋತಿ.

ಇನ್ನೊಂದೆಡೆ ನೋಡಿ ಲಂಚವಂಚನಕ್ಕೆ ಕೈಯ್ಯಾನದ ಭಾಷೆಯನ್ನಾಡಿದ್ದಾಳೆ ಮತ್ತೊಬ್ಬ ಶರಣೆ ಸತ್ಯಕ್ಕ. ಶರಣರ ಮನೆಯ ಸಮ್ಮಾರ್ಜನೆ ಮಾಡುವ ಈಕೆ ಏಕದೇವೋ ನಿಷ್ಠೆಯುಳ್ಳವಳು. ಬೇರೆಯವರ ಬಳಿ ಅಮೂಲ್ಯ ವಸ್ತುಗಳನ್ನು ನೋಡಿ ನಾವು ಬೇಕೆಂದು ಬಯಸಿ ಭೋಗವಸ್ತುಗಳಿಗೆ ಆಸೆಪಟ್ಟು ಸತಿಗೆ ಪತಿಗೆ ಲಂಚ ತೆಗೆದುಕೊಳ್ಳಲು ಪ್ರೋತ್ಸಾಹಿಸುವ ಹೆಣ್ಣು ಗಮನಿಸಬೇಕು.

ಅಂಗಕ್ಕೆ ಬಡತನವಲ್ಲದೆ ಮನಕ್ಕೆ ಬಡತನವುಂಟೆ? ಲಕ್ಕಮ್ಮನ ನುಡಿ ಅದು ನಿಜ ಮನ ಶ್ರೀಮಂತನಾಗಿರಬೇಕು. ಬೇರೆಯವರಿಗೆ ಸಲ್ಲಬೇಕಾದುದನ್ನು ನಾವು ಅಪಹರಿಸಿ ಸಂಗ್ರಹಿಸಿಡುವುದು ತಪ್ಪು ಎಂದು ಜಗತ್ತನ್ನು ಎಚ್ಚರಿಸುತ್ತಿದ್ದಾಳೆ. ಇಂದಿಂಗೆಂತು ನಾಳಿಂಗೆಂತೆಂದು ಚಿಂತಿಸಲೇಕೆ ತಂದಿಕ್ಕುವ ಶಿವಂಗೆ ಬಡತನವೆ? ಎಂದು ಕೇಳುತಿದ್ದಾಳೆ. ಈ ಹೆಣ್ಣುಮಗಳು ಮಮಕಾರವನ್ನು ತೊರೆದಠಾವಿನಲ್ಲಿ ವಾಸಿಸುವ ಹೆಣ್ಣಿನ ಬಾಯಿಂದ ಇನ್ನಾವ ನುಡಿ ಕೇಳುವುದು. ಇಂದು ಸರ್ಕಾರದ ಹಣ ನಮ್ಮ ದುಡಿಮೆಗೆ ಸಾಲುತ್ತಿಲ್ಲ ಎಂದು ತನ್ನ ಮನಬಂದಂತೆ ವ್ಯಯಮಾಡುತ್ತಿರುವ ಹೆಣ್ಣು ಇಂದು ಬರುತ್ತಿರುವ ಹಣಕ್ಕೆ ತಕ್ಕ ಕಾಯಕವನ್ನು ತಾನು ಮಾಡು ತ್ತಿದ್ದೇನೆಯೆ ಎಂದು ಯೋಚಿಸುವಳೆ? ಅಂದು ಯೋಚಿಸಿದ್ದರು. ಅದರಿಂದಲೇ ಬುವಿ ಸ್ವರ್ಗವಾಗಿತ್ತು ತಾನೊಬ್ಬ ಬದುಕಿರೆ ಸಾಕು ಜನಗಳಲಿ ನನಗೇನು? ಎಂಬ ಭಾವನೆ ತಾಳಿರುವವರೆ ಇಂದು ಹೆಚ್ಚು. ಬೇರೊಬ್ಬರ ನೋವಿನಲ್ಲಿ ಸುಖಕಾಣುತ್ತ ವರ್ಗಭೇದಗಳಿಂದ ತುಂಬಿದ ಮೇಲು.ಕೀಳೆಂಬ ಕಲುಷಿತ ಬುದ್ಧಿಯಿಂದ ಅಧಿಕಾರ ನೌಕರರೆಂಬ ತಾರತಮ್ಯತೆಯಿಂದ ದೂರಾಗಲಿಲ್ಲ ಮೇಲಧಿಕಾರಿಯ ಕೈಗೆ ಸಿಕ್ಕಿ ಎಷ್ಟು ಹೆಣ್ಣು ಮಕ್ಕಳು ನರಳುತ್ತಿಲ್ಲ? ಆತ ಕಾಗೆಬೆಳ್ಳಗಿದೆ ಎಂದರೂ ಒಪ್ಪಿಕೊಳ್ಳುವ ಜನ ನಮ್ಮಲ್ಲಿದ್ದಾರೆ. ಆಕೆಗೆ ಮುಕ್ತಿ ಇಲ್ಲದಿರೆ ನೋವಿನ ಸಂಕೋಲೆ. ನಾನೇ ಹೆಚ್ಚೆಂಬ ಅಹಂ ಬಿಡದವರೆ. ಈ ಬುವಿ ಬಿಡುವಾಗಲೂ ಯಮನಿಗೆ ಆದೇಶ ನೀಡುವ ರೇನೋ? ಮೊದಲು ನನ್ನ ಕೈಕೆಳಗೆ ಕೆಲಸ ಮಾಡುವವರನ್ನು ಕರೆದು ಕೊಂಡು ನಡೆ ಅಲ್ಲಿ ನಾನು ನಂತರ ಬರುವೆ ಅವರಿಗೆ ಯಾವ ಶಕ್ತಿ ಕೊಡಬೇಕೆಂದು ಹೇಳುವೆ! ಎನ್ನುವವರು ಉಂಟು. ಈ ಜಗವೆಂಬ ಗಾಡಿಯಲ್ಲಿ ನಾವೆಲ್ಲ ಕೆಲಸದಾಳುಗಳು. ನಮ್ಮ ಶಕ್ತಿಗನುಗುಣವಾಗಿ ಕೆಲಸ ದೊರಕುವುದೆಂದು ಅರಿತವರಾರಿಹರು. ಎಷ್ಟು ಜನ ಇರುವರು? ಒಂದು ಮನೆ ಕಟ್ಟಿಸಲು ಕಂಟ್ರಾಕ್ಟರ್ ಗಾರೆಕೆಲಸದವ, ಇಟ್ಟಿಗೆ ಹೊರು

ಸವ, ಅದನ್ನು ಹದವಾಗಿ ಕಲೆಸುವ, ಚಾಕಚಾಕ್ಯತೆ ಇರುವ ವ್ಯಕ್ತಿಗಳಂತೆ ಆಯ
ಹಂತಸ್ತಿನಲ್ಲೂ ಇದ್ದೆ ಇರುವರಲ್ಲವೆ? ಅವರು ಅನುಸರಿಸುವ ಜವಾಬ್ದಾರಿಗೆ ತಕ್ಕಂ
ಕೆಲಸ, ಅಂತೆ ಹಣದೊರಕುವುದು. ಇದಕ್ಕೇಕೆ ಭೇದ ಗಾಳಿ ನೀರು ಬೆಂಕಿ ಯಾವು
ಭೇದ ಮಾಡುವು. ಆದರೆ ಮನುಷ್ಯ?

12ನೇ ಶತಮಾನ ಆ ಕಾರಣದಿಂದ ಒಂದು ಭವ್ಯ ಯುಗ. ಯಾವರೀ
ಕೀಳರಿಮೆ ಇಲ್ಲ. ಸ್ತ್ರೀಪುರುಷರೆಂಬ ಭೇದವಿಲ್ಲದೆ ಕಾಯಕದ ಅಡಿಗಲ್ಲಿನಲ್ಲಿ ಭವ
ಭವನ ಕಟ್ಟಿದರು. ಹೆಣ್ಣಿನ ಜೀವನ ಉತ್ತುಂಗಕ್ಕೇರಿತು. ಹೆಣ್ಣು ನೆಮ್ಮದಿ ಜೀವ
ನಡೆಸುತಿದ್ದಳು. ಇಂದು ಬಸವಣ್ಣ ನಿದ್ದ ನಾಡಿನಲ್ಲಿ ಹೆಣ್ಣಿನ ಜೀವಂತ ದಹ
ವಾಗುತ್ತಿದೆ. ಅಹಿಂಸಾ ಪರಮೋಧರ್ಮ ಎಂದನಾಡಿನಲ್ಲಿ ಹೆಣ್ಣಿನ ಹಿಂಸೆ ಹೆಚ್ಚುತ್ತಿದೆ
ಹದ್ದಿನಂತೆ ಕುಕ್ಕಿತಿಂದು ನೆತ್ತರ ಹೀರಿದರು ತೃಪ್ತಿಯಿಲ್ಲ. ಶರಣರಿದ್ದ ನಾಡು ಆದರ
ಸಮಾಜದ ನಾಡು. ಇಂದು ಗೋಮುಖ ವ್ಯಾಘ್ರಗಳ ಸ್ವಾರ್ಥಿಗಳ ಕೈಗೆ ಸಿಕ
ನರಳುತ್ತಿದೆ. ಇದೆಲ್ಲ ನಾಶವಾಗಿ ಶರಣ ನಾಡು ಉದಯವಾದಾಗ ಬೆನ್ನಲ್ಲಿ ಚೂ
ಹಾಕುವ ಜನ ನಾಶವಾದಾಗ ನಂಬಿದವಳ ಇಂಬಿಟ್ಟ ಕೊಲ್ಲುವುದು ಕಡಿಮೆಯಾ
ಹೆಣ್ಣಿನ ಬಗ್ಗೆ ಗೌರವ ಭಾವನೆ ತಾಳಬೇಕಾದರೆ ಶರಣರ ಜೀವನ ದರ್ಶನ ಅವಶ್ಯಕ.

ಸ್ತ್ರೀ ಪುರುಷರಿಬ್ಬರೂ ರಥದಗಾಲಿಗಳು ಒಬ್ಬರು ಇನ್ನೊಬ್ಬರಿಗೆ ಸಹಕಾರಿ ಅಂ
ಜೀವನನೌಕೆ ಸಾಗಲು ಆಕೆ ಕಾಲವ್ಯಯ ಮಾಡದೆ ಕಾಯಕ ಅನುಸರಿಸಬೇಕು. ಹೆಣ
ಮಕ್ಕಳು ಕೆಲಸಕ್ಕೆ ಹೋಗುವುದು, ಹೆಚ್ಚು ಓದುವುದು, ತಪ್ಪೆಂಬ ಭಾವನೆ ಹೋ
ಬೇಕು. ಒಮ್ಮೆ ಒಬ್ಬ ಮಹಾನುಭಾವರ ಬಳಿ ಹೋಗಿ ಹೆಣ್ಣು ಮಗಳು ತಮ
ಮನೆಯ ಕಷ್ಟವನ್ನು ತಿಳಿಸಿ ಕೆಲಸ ಕೊಡಿಸಿರೆಂದು ಬೇಡಿದಾಗ ಆತ ಕೊಟ್ಟ ಉತ್ತ
'ನೀವು ಓದುಕುವುದು ಮೊದಲ ತಪ್ಪು. ಕೆಲಸಕ್ಕೆ ಬರುವುದು ಎರಡನೇ ತಪ್ಪ
ಕೆಲಸಕ್ಕೆ ಸೇರಿದರೆ ಮಕ್ಕಳೆಂದು ರಜಾ ತೆಗೆದುಕೊಂಡು ಕಾಲಹರಣ ಮಾಡುವಿರಿ
ಎಂದರಂತೆ ಆತನನ್ನು ಹೆತ್ತ ತಾಯಿ ಹೆಣ್ಣೆ ಆದರೂ ಸತ್ಪುತ್ರನನ್ನು ಪಡೆದ ಧನ್ಯಳಿ
ಬೇಕು. ಇಂಥವರೇ ಇಪ್ಪಾರೆಂದಲ್ಲ. ಇನ್ನು ಅನೇಕ ಉದಾರಿಗಳು ಮಹಾತ್ಮರ
ಸುತ್ತೂರು, ಸಿದ್ಧಗಂಗೆ ಹುಬ್ಬಳ್ಳಿ ನಾನಾಕಡೆ ಇರುವುದರಿಂದ ಹೆಣ್ಣು ತನ್ನ ಜೀವ
ಸುಗಮಗೊಳಿಸಿಕೊಳ್ಳಲು ಸಾಧ್ಯವಾಗಿದ್ದಾಳೆ. ಅನ್ಯರಿಗೆ ಹಂಗಾಗದೆ ಉಳಿದಿದ್ದಾಳ
ಅವರೆಲ್ಲರ ಆಶೀರ್ವಾದದ ಫಲ ಉನ್ನತ ಶಿಕ್ಷಣ ಲೌಕಿಕ ಜೀವನಕ್ಕೆ ಆಲೌಕಿಕ ಜೀವನಕ
ಬೇಕಾಗುವಂಥ ವಿದ್ಯೆ ಪಡೆಯುತ್ತಿದ್ದಾಳೆ. ಇದರ ಜೊತೆಗೆ ಕಾಯಕವನ್ನನುಸರಿ
ಶರಣರವಾಣಿಯನ್ನು ನಿಜವಾಗಿಸಿದ್ದಾಳೆ. ಬಸವ ಯುಗ. ಕಾಯಕ ಯುಗದ ಕಲ್ಪನೆಯ
ನೋಟ ಇಂದು ಸ್ವಲ್ಪಮಟ್ಟಿಗೆ ಕಾಣುತ್ತಿದ್ದೇವೆ. ಆದರೂ ಇದ್ದ ಒಬ್ಬನೇ ಮ
ತಮ್ಮನನ್ನು ನಾಡಿಗೆಅರ್ಪಿಸಿ ತಾನುದಿಟ್ಟೆಯಾಗಿ ಹೋರಾಡಿದಅಕ್ಕನಾಗಮ್ಮನವೀರತ್ವ

ಸಂಸಾರತೆತ್ತ ವೀರವನಿತೆಯರಾದ ನೀಲಲೋಚನೆ ಗಂಗಾಂಬಿಕೆಯರ ತಾಳ್ಮೆ ಇಂದು ಹೆಣ್ಣು ಮಕ್ಕಳಿಗೆ ಬಂದಿದ್ದರೆ ಅವರೂ ಬೂದಿಯಾಗಿ ಸುಟ್ಟು ಹೋಗುತ್ತಿರಲಿಲ್ಲ; ಆತ್ಮಹತ್ಯೆ ಮಾಡಿಕೊಳ್ಳುತ್ತಿರಲಿಲ್ಲ. ವಸುಧೆ ಮೆಚ್ಚುವಂತೆ ಹಸನಾಗಿ ಬಾಳಿದ ನಮ್ಮ ಶರಣರ ಭವ್ಯ ಜೀವನ ಇಂದು ನಮಗೆಲ್ಲ ಬೇಕು. ಅಂಥ ಶಿಕ್ಷಣ-ವನ್ನು ಪಡೆದು ಬಸವನ ನಾಡು ಇದೇ ಕಲ್ಯಾಣವಾದಾಗ ಕೈಲಾಸವನ್ನೆಲ್ಲೂ ಹುಡುಕದೆ ಇಲ್ಲೇ ಕಾಣುತ್ತೇವೆ. ಇದೇ ತೃಪ್ತಿಯ ಆಗರವಾಗುತ್ತದೆ. ಹೆಣ್ಣು ಇಂದು ವಿದ್ಯಾವಂತಳಾದರೂ ಕೂಡ ಧಾರ್ಮಿಕ ನೈತಿಕ ಶಿಕ್ಷಣ ದೊರಕಿದಾಗ ಮಾತ್ರ ಶಿಕ್ಷಣ ಪರಿಪೂರ್ಣವಾಗುತ್ತದೆ. ಈ ಶಿಕ್ಷಣ ದೊರಕಿಸಲು ಮೇಲೆ ಹೇಳಿದ ಸುತ್ತೂರು, ಸಿದ್ಧಗಂಗೆ, ಸಿರಿಗೆರೆ, ಹುಬ್ಬಳ್ಳಿ ಮುಂತಾದ ಮಠದ ಜಗದ್ಗುರುಗಳವರು ಶ್ರಮಿಸುತ್ತಿದ್ದಾರೆ. ಅವರ ಶ್ರಮದ ಫಲ ನಾವು ಅನುಭವಿ-ಸಿದರೆ ಸಾಲದು ಅಮೃತ ಫಲವನ್ನು ಇತರರು ಸ್ವಾದಿಸುವಂತೆ ನಿಸ್ವಾರ್ಥ ಪ್ರೇಮಿಗಳು ನಾವಾಗಬೇಕು. ಆಗ ಎಲ್ಲರ ಶ್ರಮ ಸಾರ್ಥಕವಾದೀತು. ಹೆಣ್ಣು ಸಂಜೀವಿನಿ ಎನ್ನುವುದು: ನಸ್ತ್ರೀ ಸ್ವಾತಂತ್ರ : ಎಂಬುದು ಮರೆಯಾದೀತು ಹೆಣ್ಣಿನ ಬಗ್ಗೆ ಗೌರವ ಬೆಳೆಯುವುದರಲ್ಲಿ ಆಶ್ಚರ್ಯವಿಲ್ಲ.

---

## ಪಾಲಿಸೆನ್ನನು ಗುರುವೇ

**ಶ್ರೀಮತಿ ಲೀಲಾ ಕಲಕೋಟಿ** ವಿದ್ಯಾಚೇತನ, ನವೋದಯನಗರ, ಧಾರವಾಡ-3

ಪಾಲಿಸೆನ್ನನು ಗುರುವೇ
ಪಾರಮಾರ್ಥಿ ದೊರೆಯೇ
ಪರಿಪರಿಯಾಗಿ ಬೇಡುವೆ,
ಪದ್ಮಾಸನದ ದೊರೆಯೇ
ಪುಲಿಯಾಳದ ಗುರುವೇ
ಪಾ...................... ||೧||

ಕಿಂಕರನು ನುಡಿದಂತೆ
ಬಹು ಬಿಂಕದಾ ನುಡಿಗೇಳಿ
ಮಂಕಾಗಿ ಬಂದಿರುವೆ
ನಿನ್ನ ನಾದಕೆ ಮೆಚ್ಚಿ
ಪಾ................. ||೨||

ಭಕ್ತಳಾಗಿ ಬಂದಿರುವೆ
ಹಸಿವು-ತೃಷೆ ತಂದಿರುವೆ
ಕರಮುಗಿದು ಕೇಳುವೆ,
ಶಿರಬಾಗಿ ಬೇಡುವೆ
ಪಾ.. ............... ||೩||

ಭಯ ಹರಿಸಿ ಭಕ್ತಿ ತರಿಸೆಂದೇ
ಬಂದಿರುವೆ ನಾ! ತಂದೆ,
ಬಂಧು ಬಾಂಧವ್ಯದಲೆ,
ಭವ್ಯ ಕಟ್ಟಡ ನೀನೆಂದೆ
ಪಾ...................... ||೪||

ತೊಟ್ಟು ಶಿವನ ರೂಪವನೇ
ಬೆಟ್ಟದಲಿ ನೀ ಕುಳಿತಿರುವೆ.
ನಿನ್ನ ಬಿಟ್ಟು ಎಮಗೆ,
ಬೇರೆ ಬಟ್ಟೆ ಆವುದಿದೆ?
ಪಾ...... ................. ||೫||

ಏನೆಲ್ಲವ ನೀನೆಂದೇ
ನಿನ್ನಲ್ಲಿಗೆ ಬಂದಿರುವೆ.
ಕರೆದು ನೋಡೆಲೆ ತಂದೆ.
ಕರುಣೆ ಯಿಂದೊಮ್ಮೆ.
ಪಾ ........................ ||೬||

# ಪುಣ್ಯನದಿ ನರ್ಮದಾ

ಪ.ರಾಮಕೃಷ್ಣ ಶಾಸ್ತ್ರಿ

ಶಿವಶಕ್ತಿ ನಿಲಯ ಪೊ॥ ಮಜ್ಜಿನ 574295 ದಕ್ಷಿಣಕನ್ನಡ ಜಿಲ್ಲೆ

ಭಾರತದ ಪುಣ್ಯನದಿಗಳಲ್ಲಿ ನರ್ಮದಾನದಿಯೂ ಒಂದು. ಗಂಗಾನದಿಯಲ್ಲಿ ಸ್ನಾನ ಮಾಡಿದಾಗ ಮಾತ್ರ ಪವಿತ್ರತೆ ಬರಬಹುದು. ಆದರೆ ನರ್ಮದೆಯನ್ನು ಒಂದು ಸಲ ನೋಡಿದರೆ ಸಾಕು, ಎಲ್ಲಾ ಪಾಪಗಳೂ ಪರಿಹಾರವಾಗುತ್ತವೆ; ಆದರಲ್ಲಿ ಸ್ನಾನ ಮಾಡಿದರೆ ನೂರು ತಲೆಮಾರು ಹಿಂದಿನ ಪೂರ್ವಜರಿಗೂ ಮೋಕ್ಷ ಸಿಗುತ್ತದೆ ಎಂಬ ಪ್ರತೀತಿಯಿದೆ. 2 ಸಾವಿರ ಅಡಿ ಎತ್ತರವಾದ ಅಮರಕಂಟಕ ಬೆಟ್ಟದಲ್ಲಿ ನರ್ಮದಾನದಿ ಹುಟ್ಟುವುದು. ಅನಂತರ ೮೦೧ ಮೈಲು ದೂರಸಾಗಿ ಭಟೋಜ್‌ನ ಬಳಿ ಕ್ಯಾಂಬೆ ಕೊಲ್ಲಿಯನ್ನು ಸೇರುತ್ತದೆ. ನರ್ಮದಾ ಹುಟ್ಟುವ ಸ್ಥಳದಲ್ಲಿ ೧೦ ಕೋಟಿ ತೀರ್ಥಗಳವೆಯಂತೆ. ಆದರ ದಡವ ಉದ್ದಕ್ಕೂ ೪೦೦ ಪ್ರಸಿದ್ಧ ತೀರ್ಥಗಳಿವೆ. ೧೨-ಜೋತಿರ್ಲಿಂಗಗಳಲ್ಲಿ ಒಂದಾದ ಓಂಕಾರೇಶ್ವರ ದೇವಾಲಯವು ಅದರ ದಡದಲ್ಲಿದ್ದು ಸೂರ್ಯವಂಶದ ರಾಜ ಇಕ್ಷ್ವಾಕು ಇಲ್ಲಿ ಶಿವಾರಾಧನೆ ಮಾಡುತ್ತಿದ್ದ ಕಾರಣ ಆ ಪುಣ್ಯ ಸ್ಥಳಕ್ಕೆ ಶಿವಪುರಿ ಎಂದೂ ಹೆಸರಿದೆ.

ನರ್ಮದಾ ನದಿಯ ನೀರಿಗೆ ಹಾವಿನ ವಿಷವನ್ನು ನಿವಾರಿಸುವ ಗುಣವಿದೆ ಎನ್ನುತ್ತಾರೆ. ಈ ನದಿಗೆ ಕಾವೇರಿ, ಕಪಿಲಾ, ವಿರಾದಿ ಮತ್ತು ವೈಶಾಲಿ ನದಿಗಳು ಸೇರಿಕೊಳ್ಳುತ್ತವೆ. ಈ ನದಿಯ ದಂಡೆಯಲ್ಲಿ ಹಿಂದಿನ ಕಾಲದಲ್ಲಿ ಹಲವು ಋಷಿಗಳು ಉಗ್ರ ತಪಸ್ಸಾಚರಿಸುತ್ತಿದ್ದರು. ಇಲ್ಲಿನ ಆದಿವಾಸಿಗಳಾದ ಭಿಲ್ ಜನರು ಸಪ್ತ ಚಿರಂಜೀವಿಗಳಲ್ಲಿ ಒಬ್ಬನಾದ ಮಹಾಭಾರತದ ಅಶ್ವತ್ಥಾಮ ಆಗಾಗ ನರ್ಮದಾ ನದಿಯ ದಡದಲ್ಲಿ ಸಂಚರಿಸುವುದನ್ನು ನಾವು ನೋಡಿದ್ದೇವೆ ಎಂದು ಹೇಳುತ್ತಾರೆ. ನರ್ಮದೆಯ ಪಶ್ಚಿಮ ದಿಕ್ಕಿನಲ್ಲಿ ಪ್ರಮುಖ ಯಾತ್ರಾಸ್ಥಳವಾದ ಶುಕ್ಲತೀರ್ಥವಿದೆ. ಅಲ್ಲಿಂದ ೧೦ ಮೈಲು ದೂರದಲ್ಲಿ ಇರುವ ಭಡೋಚ್‌ನಲ್ಲಿ ಭೃಗುಮಹರ್ಷಿ ಆಶ್ರಮ ನಿರ್ಮಿಸಿಕೊಂಡಿದ್ದನಂತೆ ಅಮರ ಕೋಶದಲ್ಲಿ ನರ್ಮದಾನದಿಗೆ ಸೋಮೋದ್ಭವ, ಮೈಕೇಲ ಕನ್ನಿಕಾ ಎಂಬ ಹೆಸರುಗಳಿದ್ದು, ರೇವಾ ನದಿಯೆಂದರೆ ನರ್ಮದಾ ನದಿ ಎಂದೇ ಹೇಳಲಾಗಿದೆ. ಗಂಗಾನದಿ ಕನಕಹಾಳದಲ್ಲಿ, ಸರಸ್ವತಿನದಿ ಕುರುಕ್ಷೇತ್ರದಲ್ಲಿ ಮಾತ್ರ ಪವಿತ್ರವಾಗಿದ್ದರೆ ನರ್ಮದಾ ನದಿಯ ಪ್ರತಿ ಅಂಗುಲವು ಪವಿತ್ರ ಎಂಬ ಭಾವನೆಯಿದೆ.

ಶಿವನು ಒಂದು ಸಲ ಉಗ್ರ ತಪಸ್ಸು ಕೈಗೊಂಡಾಗ ಅವನ ಶರೀರದಿಂದ ಹರಿದ ಬೆವರು ನದಿಯ ರೂಪ ತಾಳಿತು. ಆ ನದಿಯಿಂದ ಕನ್ನಿಕೆಯು ರೂಪದಿಂದ ನರ್ಮದಾ ಎದ್ದು ಬಂದು ಶಿವನನ್ನು ಆರಾಧಿಸಿದಳಂತೆ. ಆದರಿಂದಾಗಿ ಈ ನದಿಗೆ ರುದ್ರಕನ್ಯೆ ಎಂಬ ಹೆಸರಿದೆ ನದಿ ಹರಿಯುವಾಗ ಸಪ್ಪಳವಾಗುವ ಕಾರಣ ರೇವಾ ಎನ್ನುವ ಹೆಸರು ಬಂದಿದೆ. ನರ್ಮದೆ ಹುಟ್ಟುವ ಅಮರಕಂಟಕಕ್ಕೆ ಮೇಕಲಕ ಎಂಬ ನಾಮಾಂತರ ವಿರುವುದರಿಂದ ಈ ನದಿಯನ್ನು ಮೇಕಲಕನ್ಯೆಯೆಂದೂ ಹೇಳುತ್ತಾರೆ. ಮಹಾ ಭಾರತ, ಮತ್ಸ್ಯಪುರಾಣ, ಪದ್ಮಪುರಾಣ, ಸ್ಕಾಂದಪುರಾಣ, ಕೂರ್ಮ ಪುರಾಣಗಳಲ್ಲಿ ನರ್ಮದಾ ಮಹಿಮೆಗಳನ್ನು ಹೇಳಲಾಗಿದೆ.

ಜೀವನದಿಯೆಂದು ಪ್ರಖ್ಯಾತವಾಗಿದ್ದರೂ ನರ್ಮದೆಯ ನೀರನ್ನು ಸದುಪಯೋಗ ಪಡಿಸಲು ಯಾವ ಯೋಜನೆಗಳನ್ನು ಕೈಗೊಂಡಿಲ್ಲ

  

# ವೈರಾಗ್ಯ ಶಿಖಾಮಣಿ ಮಹಾದೇವಿಯಕ್ಕ

ಶ್ರೀ ಮೋಟಗಿ ಮಲ್ಲಿಕಾರ್ಜುನ "ಕನ್ನಡ ಕವಿಕಾಳಿದಾಸ" ಅಥಣಿ, (ಬೆಳಗಾವಿ ಜ

## ನಮೋ ನಮೋ !

"ಆದಿಶಕ್ತಿ ಅನಾದಿ ಶಕ್ತಿಯೆಂಬರು, ಅದನಾರು ಬಲ್ಲರಯ್ಯಾ?
ಆದಿಯೆಂದರೆ ಕುರುಹಿಂಗೆ ಬಂದಿತು; ಅನಾದಿಯೆಂದರೆ ನಾಮಕ್ಕೆ ಸಂದಿತ್ತು.
ಆದಿಯಲ್ಲ-ಅನಾದಿಯಲ್ಲ. ನಾಮವಿಲ್ಲದ ಸೀಮೆಯಿಲ್ಲದ ನಿಜಶಕ್ತಿ ಚಿಚ್ಛಕ್ತಿ-
ಯಾಯಿತ್ತು ನೋಡಾ! ಅಂತರಂಗ ಪ್ರಭೆ ಬಹಿರಂಗವೆಲ್ಲ ತಾನೆ ಆಗಿ
ಗುಹೇಶ್ವರ ಲಿಂಗದಲ್ಲಿ ಸಂದಿಲ್ಲದಿಪ್ಪ ಮಹಾದೇವಿಯಕ್ಕನ ಶ್ರೀಪಾದಕ್ಕೆ-
ನಮೋ ನಮೋ ಎಂಬೆನು!"

—ಅಲ್ಲಮಪ್ರಭುದೇವರು.

ಹನ್ನೆರಡನೆಯ ಶತಮಾನದ ಮಹಾಶರಣ - ಶರಣೆಯರಲ್ಲಿ ಮಹಾದೇವಿಯಕ್ಕಗಳ ಸ್ಥಾನ ಅತ್ಯಂತ ಆದರಣೀಯವೂ ಆದರ್ಶಪ್ರಾಯವೂ ಎನಿಸಿ ಮಹೋನ್ನತವಾದುದು. ಏಕೆಂದರೆ ಮಹಾದೇವಿಯಕ್ಕ ವೈರಾಗ್ಯ ಸಿಧಿಯಾಗಿದ್ದಂತೆ ಪರಶಿವತತ್ವಶಿಖಾಮಣಿಯೆನಿಸಿದ್ದಳು. ಮತ್ತು ಈ ಶರಣ-ಶರಣೆಯರ ವಚನ ವಾಙ್ಮಯದಲ್ಲಿ ಅಕ್ಕಗಳ ವಚನಗಳಿಗೆ ಬಹು ಬೆಲೆಯುಳ್ಳ ಒಂದು ವಿಶಿಷ್ಟ ಸ್ಥಾನವಿದೆ. ಮಹಾದೇವಿಯಕ್ಕಗಳ ಆ ಮಹಾದಾರ್ಶನಿಕ ಜೀವನದ ಆ ದಿವ್ಯವಚನ ರತ್ನಗಳ ರಹಸ್ಯ-ರಸಾನುಭಾವಗಳು ಸುಲಭ ಸಹಜ ಸಂವೇದ್ಯವಾದುವುಗಳೆಲ್ಲ ವೆಂಬುದನ್ನು ಯಾರೂ ಮರೆಯುವಂತಿಲ್ಲ. ಇಂತಹ ಮಹಂತ ಜೀವನ ಜ್ಯೋತಿಯೆನಿಸಿರ್ದ ಈ ಮಹಾತ್ಮಳ ವಚನರತ್ನಗಳು ರಸಸೋನೆಗಳಾಗಿದ್ದ ಮಹಾತತ್ವಾತ್ಮಕವಾಗಿ ರಹಸ್ಯಕ್ಕೆ ರಹಸ್ಯಗಳಾಗಿ ನಿಲ್ಲುತ್ತವೆ. ಮಹಾದೇವಿಯಕ್ಕಗಳ ವಚನಕಾವ್ಯದಲ್ಲಿನ ಒಂದೊಂದು ಶಬ್ದಗಳು ಭೂವ್ಯಾಕಾಶಗಳ ತೂಕಕ್ಕೂ ಮಿಗಿಲೆನಿಸಿವೆ - ಅಂತೆಯೇ ಕಲ್ಯಾಣದ ಶಿವಶರಣರ ಅನುಭವ ಮಂಟಪದ ಮಧ್ಯದಲ್ಲಿ ಅಧ್ಯಕ್ಷ ಪೀಠದಲ್ಲಿದ್ದ ಅಲ್ಲಮಪ್ರಭು ವಾದಿಯಾಗಿ ಎಲ್ಲ ಶರಣ-ಶರಣೆಯರು ಮಹಾದೇವಿಯಕ್ಕಗಳನ್ನು ಮನವಾರೆ ಕೊಂಡಾಡಿದ್ದಾರೆ. ಅಂತೆಯೇ ಆಕೆಯ ಘನಮನೋಹೃದಯದ ಮಹಾ ಜೀವನಕ್ಕೆ ಮಾರುಹೋಗಿ ಮೆಚ್ಚಿಕೊಂಡಿದ್ದಾರೆ. ಈ ಮೊದಲೇ ಮಹಾದೇವಿಯಕ್ಕಗಳು, ಆ ಬಸವಾದಿ ಪ್ರಮಥರ ಅನುಭವಮಂಟಪದಲ್ಲಿ ಆತ್ಮಜ್ಞಾನಿ-ಅಲ್ಲಮಪ್ರಭುವಿನ ಜ್ಞಾನಾಗ್ನಿ ಪರೀಕ್ಷೆಗೆ ಒಳಪಟ್ಟವಳಾಗಿ ತೇರ್ಗಡೆ ಹೊಂದಿದ್ದಳಾಕೆ-ಮಹಾತಾಯಿ.

ಶ್ರೀ ಬಸವಾದಿ ಪ್ರಮಥಗಣ ಸಂದೋಹದಲ್ಲಿ ಎರಡು ಮಹಾನ್ ವಿಶಿಷ್ಟ ದಿವ್ಯ ಶಕ್ತಿಯುಕ್ತ ನಿರ್ಮಾಯ ವ್ಯಕ್ತಿಗಳೆಂದರೆ ಒಬ್ಬರು – ಅಲ್ಲಮ ಪ್ರಭುದೇವರು; ಇನ್ನೊಬ್ಬರು–ಮಹಾದೇವಿಯಕ್ಕಗಳು. ಆದರೆ ಇಲ್ಲಿ ಮೂರನೆಯವರಾದ ಸೊನ್ನಲಿಗೆಯ ಸಿದ್ಧರಾಮ ಶಿವಯೋಗಿಗಳ ಹೆಸರನ್ನೂ ಹೆಸರಿಸಬಹುದು ಇಲ್ಲಿ. ಆದರೆ ಒಂದು ಮಾತು ನಿಜ ಎಂದರೆ-ಅಲ್ಲಮ ಪ್ರಭುವಿಗೆ ಆ ಮಾಯಾದೇವಿ ಮೋಹಿಸಿ ಬಂದಾಗ ಅಲ್ಲಗಳೆಯುತ್ತ"........ ....ಎಲೋಕಾಮ........ಎಸೆಯದಿರು ನಿನ್ನ ಬಾಣವ, ಎಸೆದು ಹುಸಿಗೊಳಿಸದಿರು! ....... ... ಎಂದು ಕಾಮಲತೆಯಂತಿರ್ದ ಆ ಮಾಯೆಯನ್ನು ಆವನು ಸೋಲಿಸಿ ಅವಳ ಪಾಶಕ್ಕೆ (ಕಾಮ ಪ್ರೇಮಪಿಪಾಶೆಗೆ) ಬಲಿಯಾಗದೆ ತಿರಸ್ಕರಿಸಿ ಹೊರಟು ಹೋಗುತ್ತಾನೆ. ಇದು ಮಾಯಾ ಕೋಲಾಹಲನೆನಿಸಿದ ವ್ಯೋಮ ಕಾಯನಾದ ಪರಮ ಆತ್ಮಜ್ಞಾನಿ ಅಲ್ಲಮಪ್ರಭುವಿಗೆ ಒದಗಿದ ಮಹಾಮಾಯೆಯ ಪರಮ ಪರೀಕ್ಷಾ ಪ್ರಸಂಗ.

ಇನ್ನು-ಮಹಾದೇವಿಯಕ್ಕಗಳು ವೀರಶೈವ ಶರಣ ಮಾರ್ಗದ ಕೆಲವು ಕರಾರುಗಳನ್ನು ತಾನು ಹಾಕಿದಾಗ ಆಕೆಯ ಆ ಕರಾರು ನಿಯಮಗಳನ್ನು ಕೌಶಿಕ ಮಹಾರಾಜನು ಒಪ್ಪಿ ಮಹಾದೇವಿಯಕ್ಕಗಳನ್ನು ದೈನ್ಯದಿಂದ ಕೇಳಿಕೊಂಡು ತನ್ನ ಅರಮನೆಗೆ ಕರೆಸಿ ಬರಮಾಡಿಕೊಳ್ಳುವನು. ಮುಂದೆ ಮಹಾದೇವಿಯಕ್ಕ ತನ್ನಿಷ್ಟಲಿಂಗ ಭಕ್ತಿ ಪೂಜಾ ಧ್ಯಾನದಲ್ಲಿರತಳಾದಾಗ-ಕೌಶಿಕನಿಂದ ಭಂಗವುಂಟಾಗಲು ಅವನನ್ನು ತಿರಸ್ಕರಿಸಿ ದಿಗಂಬರಕಾಯಳಾಗಿ ಮಹಾದೇವಿಯಕ್ಕ ಅಲ್ಲಿಂದ ಕಲ್ಯಾಣದತ್ತ ಹೊರಟು ಹೋಗುತ್ತಾಳೆ.

ಅಲ್ಲಿ ಪ್ರಭುವಿಗೆ ಹೆಣ್ಣುಮಾಯೆಯಾಗಿ ಕಾಡಿದರೆ, ಇಲ್ಲಿ ಮಹಾದೇವಿಯಕ್ಕಗಳಿಗೆ ಗಂಡು ಮಾಯೆಯಾಗಿ ಕಾಡಿದೆ. ಪರಮತತ್ವಶಿಖಾಮಣಿ, ವೈರಾಗ್ಯ ನಿಧಿ, ಚಿಚ್ಛಕ್ತಿ ರೂಪಿಣಿ ಮಹಾದೇವಿಯಕ್ಕ ಮತ್ತು ಆತ್ಮಜ್ಞಾನಿ ಪರಮ ವೈರಾಗ್ಯ ಮೂರ್ತಿ ನಿರ್ಮಾಯ ಗಣೇಶ್ವರನಾದ ಅಲ್ಲಮ ಪ್ರಭು ಈ ಉಭಯ ಮಹಾನುಭಾವಿಗಳೂ ನಾನಾ ಬಗೆಯಾಗಿ ಕಾಡಿದ ಮಾಯೆ (ಕಾಯದ ಕಾಮಪ್ರೇಮ)ಯನ್ನು ಗೆಲಿದು ಮಹಾ ಜ್ಯೋತಿ ಬೆಳಕಾಗಿನಿಂತವರು. ಈ ದೃಷ್ಟಿಯಿಂದ ಜಗತ್ತಿನ ಅಷ್ಟೇ ಏಕೆ ಇಡೀ ಬ್ರಹ್ಮಾಂಡದ ಇತಿಹಾಸದಲ್ಲಿಯೇ ವೈರಾಗ್ಯ ನಿಧಿ ಮಹಾದೇವಿಯಕ್ಕ ಹಾಗೂ ಆತ್ಮಜ್ಞಾನಿ ಅಲ್ಲಮಪ್ರಭು ಇವರಿರ್ವರಂತಹ ನಿರಂಜನ ನಿರ್ಮಾಯ ಜ್ಯೋತಿ ಮೂರ್ತಿಗಳು ಸಿಕ್ಕುವುದಿಲ್ಲ ಆದುದರಿಂದ ಕೈಲಾಸಾಧಿಪತಿ ಶಿವ-ಪಾರ್ವತಿಯರಿಗೂ ಸಕಲ ಪ್ರಮಥ ಗಣಾಧೀಶ್ವರರಿಗೂ ವಂದನೀಯ.ರೆನಿಸಿದ್ದಾರೆ. ಈ ಅಲ್ಲಮಪ್ರಭು ಮಹಾದೇವಿಯಕ್ಕಗಳು.

ಈ ಅಲ್ಲಮಪ್ರಭು ಹಾಗೂ ಮಹಾದೇವಿಯಕ್ಕಗಳಿಗೆ, ಅವರ ಮಹಾ ಬಾಳಿನಲ್ಲಿ ನಡೆಯಲಾದ ಈ ಬಗೆಯ ಮಾಯೆಯ ಮಹಾ ಪರೀಕ್ಷಾ ಪ್ರಸಂಗ ಮಾತ್ರ, ಶಿವಯೋಗಿ ಸಿದ್ಧರಾಮನ ಮಹಾಯೋಗ ಜೀವನದಲ್ಲಿ ಒದಗಿ ಬಂದಿಲ್ಲವೆಂದು ಇಷ್ಟು ಮಾತ್ರವೇ ಹೇಳಬಹುದು. ಈ ದೃಷ್ಟಿಯಿಂದಷ್ಟೇ ಶಿವಯೋಗಿ ಸಿದ್ಧರಾಮನು, ಅವರೀರ್ವರಿಗೂ ವಿಭಿನ್ನನು ಆದರೆ ಇವರೀರ್ವರಿಗೂ ಸಿದ್ಧರಾಮನು ಕಡಿಮೆಯವನಲ್ಲ. ಅಷ್ಟೇ ಏಕೆ ಬಸವಾದಿ ಪ್ರಮಥರೆಲ್ಲರಿಗೂ ಸಿದ್ಧರಾಮನು ವಂದನೀಯ ನೆನಿಸಿದ್ದಾನೆ.

ಸೊನ್ನಲಿಗೆ ಶಿವಯೋಗಿ ಸಿದ್ಧರಾಮನು ಮಹಾಯೋಗ ಸಂಪನ್ನ. ದಿನಾಲು ಕೈಲಾಸಕ್ಕೆ ಹೋಗಿಬರತಕ್ಕಂಥವ. ಆ ಕೈಲಾಸದಿಂದ ಮರಳಿ ಬರುವಾಗ ನರಕಲಿದ್ದವರನ್ನು ಉದ್ಧರಿಸಿದ ಮಹಾತ್ಮನೀತ ಮಾಯೆಯನ್ನು ಗೆಲಿದ ಮಹಂತ ನೀತ. ಹಣೆಯಲ್ಲಿ ಉರಿಗಣ್ಣ ತಳೆದ ಶಿವರೂಪಿ ಸಿದ್ಧರಾಮನೀತ. ಸ್ವತಃ ಪ್ರಭುದೇವರಾದಿಯಾಗಿ ಶರಣ ಶರಣೆಯರೆಲ್ಲೂ ಶಿವಯೋಗಿ ಸಿದ್ಧರಾಮನ ಘನತೆ ಗೌರವಗಳನ್ನು ಕಂಡು ಆನಂದ ತುಂದಿಲರಾಗಿ ಮನದುಂಬಿ ಹೃದಯತುಂಬಿ ಹಾಡಿ ಹೊಗಳಿದ್ದಾರೆ-ಅವನನ್ನು. ಶಿವಶರಣರಲ್ಲಿ ಹಿರಿದು ಕಿರಿದುಗಳೆಂಬ ಭೇದವಿಲ್ಲ. ಸರ್ವರೂ ಸಮಾನರು. ಆದರೆ ಒಬ್ಬೊಬ್ಬ ಶರಣರ ಬಾಳಿನಲ್ಲಿ ಘಟಿಸಲಾದ ಬಗೆ ಬಗೆಯ ಘಟನೆ (ಪ್ರಸಂಗ) ಗಳಿಂದ ಮಾತ್ರ ವಿಭಿನ್ನರಷ್ಟೇ. ಪರಸ್ಪರ ಒಬ್ಬರಿಗೊಬ್ಬರು ವಂದನೀಯ ಸ್ವರೂಪರೇ ಈ ಎಲ್ಲ ಶರಣರು. ಇದುವೇ ಶರಣಮಾರ್ಗ.

ಮರ್ತ್ಯಲೋಕದ ಮಾನವ ಬಾಳಿನಲ್ಲಿ ಅಷ್ಟೇ ಏಕೆ ಮಹಾ ಮಹಾ ಋಷಿ-ಮುನಿಗಳ ಜೀವನದಲ್ಲಿಯೂ "ಈ ಕಾಯದ ಕಳವಳ"ಕ್ಕೊಳಗಾಗದವರೇ ಇಲ್ಲ. ಅರುವತ್ತು ಸಾವಿರ ವರ್ಷಗಳವರೆಗೆ ಮಹಾತಪಗೆಯ್ದ, ವಿಶ್ವಾಮಿತ್ರನೆಂತಹ ಘೋರ ಮಹಾತಪಸ್ವಿಯೆಂಬುದು, ಲೋಕಕ್ಕೆ ಲೋಕವೇ ಅರಿತು ಅಚ್ಚರಿಪಡುವಂತಹದು. ಹೀಗಿರುವಾಗ ಇಂತಹ ಮಹರ್ಷಿ ವಿಶ್ವಾಮಿತ್ರರಂತಹ ಮಹಾತಪಸ್ವಿಗಳೇ ಆ ಕಾಮನ ಬಾಣಕ್ಕೆ ತುತ್ತಾಗಿರುವಲ್ಲಿ ಇನ್ನು ಮಾನವರ ಪಾಡೇನು! ದೇವಾದಿ ದೇವತೆಗಳೂ ಈ ವಿಷಯಕ್ಕೆ ಹೊರತಾಗಿಲ್ಲ. ಹೀಗೆ ಈ ಲೈಂಗಿಕ ಪ್ರವೃತ್ತಿಯನ್ನು ಜಯಿಸುವುದು ಕಷ್ಟಕರವಾಗಿದೆ.

ಅಂತೆಯೇ ಸಾವಿರಕೊಬ್ಬ ಸತ್ಯವಂತ, ಕೋಟಿಗೊಬ್ಬ ಶರಣ, ಎಂದಿದ್ದಾರೆ ಶಿವಶರಣರು. ಭೂದೇವಿಯ ಅನಂತ ಕಾಲದ ತಪಸ್ಸಿನ ಫಲವಾಗಿ ಒಬ್ಬಶಿವಯೋಗಿ ಪುಂಗವ ಅವತರಿಸಿ ಬರುವನು. ಶಿವಯೋಗಿ ಸಿದ್ಧರಾಮನು ಕಾಮಾರಿ ಎಂಬುದನು ಭಕ್ತಿ ಭಾಂಡಾರಿ ಬಸವಣ್ಣನವರು.

"ದೇವರು ಕಾಮನ ಕೊಂದನೆಂಬರು,
ದೇವಂಗಿಬ್ಬರು ಹೆಂಡಿರುಂಟು.
ದೇವರು ಕಾಮನ ಕೊಂದುದಿಲ್ಲ ಕಾಣಿಭೋ!
ಕಾಮು ವೈರಿಗಳು,
ಕಾಮನ ಕೊಂದ ಮೂವರಿತ್ತಲೈದಾರೆ
ಕೂಡಲ ಸಂಗಯ್ಯನಲ್ಲಿ ಶುಕನು,
ಸೊನ್ನಲಿಗೆಯ ಸಿದ್ಧರಾಮಯ್ಯನು,
ಹನುಮಂತನು."

— ಶ್ರೀ ಬಸವಣ್ಣನವರು.

ಶಿವನು ಕಾಮನನ್ನುಕೊಂದ (ಸುಟ್ಟ)ನೆನ್ನುವರು. ಆದರೆ ಶಿವನಿಗೆ ಗಂಗೆ,ಗೌರಿ ಇಬ್ಬರು ಹೆಂಡಂದಿರಿರುವರು. ಆದುದರಿಂದ ನಿಜವಾಗಿ ವಿಚಾರಿಸಿದಲ್ಲಿ, ಆ ಶಿವನು ಕಾಮನನ್ನು ಕೊಂದುದಿಲ್ಲ ಕಾಣಿರಿ. ಕಾಮನ ಕೊಂದವರೆಂದರೆ-ಶುಕಮುನಿ, ಸೊನ್ನಲಿಗೆಯ ಸಿದ್ದರಾಮಯ್ಯ, ಹನುಮಂತ ಈ ಮೂರುಮಂದಿ ಮಹಾತ್ಮರು ಕಾಮನನ್ನು ಜಯಿಸಿದವರೆಂದು (ಶ್ರೀ ಬಸವಣ್ಣನವರು) ತಮ್ಮ ವಚನಗೀತೆಯನ್ನು ಮುಕ್ತ ಕಂಠದಿಂದ ಹಾಡಿದ್ದಾರೆ.

* ಇಲ್ಲಿ "ಕಾಮದ ಕಳವಳ"ವೆಂದರೆ - ಹಸಿವು, ತೃಷೆ ವಿಷಯ (ಕಾಮ) ಮೊದಲಾದ ಭೋಗಂಗಳ ಲಾಲಸೆಯಿಂದ ತಳಮಳ ಗೊಳ್ಳುವುದೆಂಬುದೊಂದು ವಿಶೇಷಾರ್ಥ. ಇನ್ನು ಕಾಮ, ಕ್ರೋಧ, ಲೋಭ, ಮೋಹ, ಮದ, ಮತ್ಸರ, ಇತ್ಯಾದಿ ಷಡ್ವೈರಿಗಳಿಂದ ಕಾಯಕಳವಳಗೊಳ್ಳುವುದೆಂಬುದು ಇನ್ನೊಂದರ್ಥ

ವೈರಾಗ್ಯನಿಧಿ ಮಹಾದೇವಿಯಕ್ಕಗಳ ಮಹಾಬಾಳಿನಲ್ಲಿ ಮುಖ್ಯವಾದ ಮೂರು ಘಟ್ಟಗಳನ್ನು ನಾವು ಕಾಣಬಹುದು. ಮೊದಲನೆಯದಾಗಿ ಶಿವಾಚಾರ ಸಂಪನ್ನೆಯಾಗಿದ್ದ ಮಹಾದೇವಿಯಕ್ಕ ತಿಳಿಸಲಾದ ತನ್ನ ಕರಾರಿನ ಮೂರು ನಿಯಮಗಳಿಗೆ ಕೌಶಿಕಮಹಾರಾಜ ತಪ್ಪಿನಡೆದುದರಿಂದ ಅವನನ್ನು ತಿರಸ್ಕರಿಸಿ ಅಕ್ಕದಿಂಗಬರ ಕಾಯಳಾಗಿ ಆಕೆ ಕಲ್ಯಾಣಮಾರ್ಗವಾಗಿ ಹೋದುದು.

ಎರಡನೆಯದಾಗಿ :— ಶರಣ ಶರಣೆಯರ ಬಳಗವನ್ನು ಕಂಡು ಧನ್ಯಳಾಗ ಬೇಕೆಂಬ ಹಂಬಲದಿಂದ ಕಲ್ಯಾಣವನ್ನು ಪ್ರವೇಶಿಸುವ ಕಾಲಕ್ಕೆ, ಹದಿನಾರರ ಪ್ರಾಯದ ಮಹಾಚೆಲುವಿಕೆಯಿಂದ ಕಣ್ಣುಕುಕ್ಕುವಂತಿರ್ದ ಸ್ಫುರದ್ರೂಪಿ ಸುಂದರ ಮೂರ್ತಿ ಮಹಾದೇವಿಯಕ್ಕಗಳನ್ನು ಕಂಡು ಮೋಹಗೊಂಡ ಕಿನ್ನರಿ ಬ್ರಹ್ಮಯ್ಯಗಳ ಕಣ್ಣರಳಿಸಿ ಅವನನ್ನು ಸೋದರನನ್ನಾಗಿ ಮಾರ್ಪಡಿಸಿದುದು.

ಮೂರನೇಯದಾಗಿ:- ಕಲ್ಯಾಣದಲ್ಲಿ 'ಅನುಭವಮಂಟಪ'ದ ಪ್ರಮಥಗಣ ಮಧ್ಯದ
ಮಹಾಜ್ಞಾನಿಯಾಗಿರ್ದ ಪ್ರಭುದೇವನ ಪರತತ್ತ್ವಾತ್ಮಕ ಜ್ಞಾನಾಗ್ನಿ ಪರೀಕ್ಷೆಯಲ್ಲಿ
ತೇರ್ಗಡೆಯಾಗಿದ್ದ ಆ ಮಹಾದೇವಿಯಕ್ಕ-ಬಸವಣ್ಣ, ಚನ್ನಬಸವಣ್ಣ, ಸಿದ್ಧರಾಮ
ಮತ್ತು ನೀಲಾಂಬಿಕೆ, ನಾಗಲಾಂಬಿಕೆ, ಮತ್ತು ಮಡಿವಾಳ ಮಾಚಿದೇವ, ನುಲಿಯ
ಚಂದಯ್ಯ, ಕಿನ್ನರಿಯ ಬ್ರಹ್ಮಯ್ಯ, ಹಡಪದ ಅಪ್ಪಣ್ಣ ಇವರೇ ಮೊದಲಾದ
ಶರಣ-ಶರಣೆಯರ ಶುಭಮಂಗಳ ಹಾರಯಿಕೆ ಹರಕೆಗಳನ್ನು ಶಿರದ ಮೇಲಿರಿಸಿಕೊಂಡ
ಪ್ರಭುದೇವನಾಣತಿಯಂತೆ ಶ್ರೀ ಶೈಲಕ್ಕೆ ಹೋಗಿ ಕದಳೀ ಬನದಲ್ಲಿ ಚೆನ್ನಮಲ್ಲಿಕಾರ್ಜು
ನನ್ನು ಬೆರಸಿ ಬೇರಿಲ್ಲವಳಾಗಿ ನಿಂದು ಬೆಳಗುತಿರ್ದುದು.

ಮುಂದುವರಿಯುತ್ತದೆ.

---

## ವಿಶ್ವ ಹಿಂದು ಪರಿಷದ್, ಕರ್ನಾಟಕ.

**"ಧರ್ಮಶ್ರೀ" 91 ಶಂಕರಪುರಂ, ಬೆಂಗಳೂರು-560 004**

## "ತರುಣರಿಗೆ ಕರೆ"

ಹಿಂದುಗಳ ಸಮಗ್ರ ಅಭಿವೃದ್ಧಿಯ ದೃಷ್ಟಿಯಿಂದ ವಿಶ್ವಹಿಂದು ಪರಿಷದ್ ಕೆಲಸ ಮಾಡುತ್ತಿದೆ. ಸಮಾಜ ಸಂಘಟನೆ, ಸುಧಾರಣೆ ಮತ್ತು ಸೇವೆಗಳ ಮೂಲಕ ಎಲ್ಲಾ ಹಿಂದುಗಳನ್ನು ಒಗ್ಗೂಡಿಸುವ, ಬಲಪಡಿಸುವ ಮತ್ತು ಶ್ರದ್ಧೆಗಳನ್ನು ಬೆಳೆಸುವ ಪ್ರಯತ್ನ ಮಾಡುತ್ತಿದೆ. ಪ್ರಾಂತ್ಯಾದ್ಯಂತ ಈ ಕೆಲಸಕ್ಕೆ ಪೂರ್ಣಾವಧಿ ಕಾರ್ಯಕರ್ತರ ಅಗತ್ಯವಿದೆ. ಕೇವಲಪುರುಷರು ಬೇಕಾಗಿದ್ದಾರೆ.

**ಅರ್ಹತೆ :—** 1. ಕನಿಷ್ಠ ಎಸ್.ಎಸ್.ಎಲ್.ಸಿ ಪಾಸಗಿರಬೇಕು
2. ದೃಢಕಾಯರಾಗಿರಬೇಕು
3. 20 ವರ್ಷಕ್ಕಿಂತ ಹೆಚ್ಚಿರಬೇಕು
4. ಸರಳಜೀವನಕ್ಕೆ ಹೊಂದಿಕೊಳ್ಳಬೇಕು
5. ಕೌಟುಂಬಿಕ ಜವಾಬ್ದಾರಿ ಇರಬಾರದು
6. ಯಾವುದೇ ದುಷ್ಟ ಚಟಗಳಿರಬಾರದು

ತರುಣರಿಗೆ ಅಂದರೆ 30 ವರ್ಷಕ್ಕಿಂತ ಕಡಿಮೆಯುವರಿಗೆ ಆದ್ಯತೆ.
ಆಸಕ್ತಿಯುಳ್ಳವರು ದಿನಾಂಕ 5-2-1990 ಕ್ಕೆ ಮುಂಚೆ ವಿವರಗಳಿಗೆ ಸ್ವವಿಳಾಸ ಸ್ಟಾಂಪ್ ಹಚ್ಚಿದ ಲಕೋಟೆಯೊಂದಿಗೆ ಪ್ರಧಾನ ಕಾರ್ಯದರ್ಶಿಗಳಿಗೆ ಮೇಲ್ಕಂ ವಿಳಾಸಕ್ಕೆ ಪತ್ರ ಬರೆಯಿರಿ.

# ಪರಿಸರ ಶುದ್ಧೀಕರಣ

ಶ್ರೀ ವೆಂಕಟರಾವ್, ಅರ್ಥಶಾಸ್ತ್ರ ರೀಡರ್ ಸರ್ಕಾರಿ ಕಲಾ ಕಾಲೇಜು, ಹಾಸನ.

ಮಾನವ ಮತ್ತು ಪರಿಸರ, ಮಾನವ ಮತ್ತು ದೇವರು ಹಾಗೂ ಮಾನವ ಮತ್ತು ಮಾನವ ಈ ಸಂಬಂಧಗಳಲ್ಲಿ ಮಾನವ ಮತ್ತು ಪರಿಸರದ ನಡುವಿನ ಸಂಬಂಧ ಅತ್ಯಂತ ಮೂಲಭೂತವಾದುದು, ಅಷ್ಟೇ ಅಮೂಲ್ಯವಾದುದು. ಪರಿಸರ ವ್ಯವಸ್ಥೆಯಲ್ಲಿ ಕೋಟ್ಯಾನು ಕೋಟಿಜೀವಿಗಳಿದ್ದು, ಮಾನವನೂ ಪರಿಸರದ ಒಂದು ಜೀವಿ ಎನಿಸಿದ್ದಾನೆ. ಪರಿಸರದಿಂದ ಪಡೆದ ಸಂಪನ್ಮೂಲಗಳಿಂದಲೇ ಅವನ ಜೀವನ ಸಾಗಬೇಕಾಗಿದೆ. ಮತ್ತು ಉಳಿದೆಲ್ಲಾ ಪ್ರಾಣಿಗಿಂತಲೂ ಹೆಚ್ಚಿನ ಪ್ರಮಾಣದ ಸಂಪನ್ಮೂಲಗಳನ್ನು ಅವನಿಂದು ಬಳಸಿಕೊಳ್ಳುತ್ತಿದ್ದಾನೆ. ಮಾನವಉಳಿದ ಎಲ್ಲಾ ಪ್ರಾಣಿಗಿಂತ ಅನೇಕ ವಿಷಯಗಳಲ್ಲಿ ಭಿನ್ನವಾಗಿದ್ದಾನೆ ಅವನು ಪರಿಸರವನ್ನು ತನ್ನ ಅನುಕೂಲತೆಗೆ ತಕ್ಕಂತೆ ಮಾರ್ಪಡಿಸಿಕೊಳ್ಳಬಲ್ಲ. ಯಾವುದೇ ಪರಿಸರದಲ್ಲಾದರೂ ಜೀವಿಸಬಹುದಾದಸಾಮರ್ಥ್ಯ ಅವನಿಗಿದೆ. ಈ ವಿಶಿಷ್ಟ ಸಾಮರ್ಥ್ಯದಿಂದ ಇಂದು ಆಗಿರುವಹಾನಿ ಅಷ್ಟಿಷ್ಟಲ್ಲ.

ಇಂದು ನಮ್ಮ ಅವಶ್ಯಕತೆಗಳು ಮುಗಿಲೆತ್ತರ ಬೆಳೆದು ನಿಂತಿವೆ. ಅವುಗಳ ಪೂರೈಕೆಗಾಗಿ ನೂರಾರು ಅಭಿವೃದ್ಧಿ ಯೋಜನೆಗಳನ್ನು ಕೈಗೊಳ್ಳಲಾಗುತ್ತಿದೆ. ಇದಕ್ಕಾಗಿ ಪ್ರಕೃತಿಯ ಸಂಪನ್ಮೂಲಗಳನ್ನು ಮನಬಂದಂತೆ ಬಳಸಿಕೊಳ್ಳಲಾಗುತ್ತಿದೆ. ಬಳಕೆಯ ಪ್ರತಿಹಂತದಲ್ಲೂ ಪರಿಸರ ಸಂರಕ್ಷಣೆಯ ಮೂಲಭೂತನಿಯಮಗಳನ್ನುಗಾಳಿಗೆತೂರಲಾಗುತ್ತಿದೆ. ಅರಣ್ಯ, ನೀರು, ಗಾಳಿ ಇವು ಪರಿಸರದ ಮುಖ್ಯ ಘಟಕಗಳು. ಇವುಗಳಿಗೂ ಮತ್ತುನಮಗೂ ಇರುವ ಸಂಬಂಧ ಅಗಾಧ. ಆದರೆ ಇಂದು ಮಾನವ ಇವೆಲ್ಲವನ್ನೂ ಕುಲಗೆಡಿಸಿ ಬಿಟ್ಟಿದ್ದು ಆ ಮೂಲಕ ತನ್ನ ಜೀವನ ಕ್ರಮವನ್ನೇ ಹಾಳು ಮಾಡಿಕೊಳ್ಳುತ್ತಿದ್ದಾನೆ. ಮಾನವ ಮತ್ತು ಆತ ವಾಸಿಸುವ ಪರಿಸರದ ನಡುವೆ ಇಂದು ಸಾಮರಸ್ಯ ಕಾಣದಾಗಿದೆ. ತಾಂತ್ರಿಕತೆ, ಕೈಗಾರಿಕೋತ್ಪನ್ನಗಳ ಹೆಚ್ಚಳ. ಮಾನವನ ಉತ್ಸರ್ಷೆಯ ಆಟೋಗಳಲ್ಲಿ ಪರಿಸರ ತನ್ನ ಸಮತೋಲನವನ್ನು ಕಳೆದು ಕೊಳ್ಳುತ್ತಿದೆ. ನಮ್ಮ ಪರಿಸರದ ಮೇಲೆ ನಡೆಯುತ್ತಿರುವ ಅವ್ಯಾಹತದಾಳಿಯಿಂದಾಗಿ ನಮ್ಮದೇಶ ದಿನಗಳೆದಂತೆ ವಿಸ್ತಾರವಾದ ಬಂಜರು ಭೂಮಿಯಾಗುತ್ತಿದೆ. ಬಹು ಉಪಯೋಗಿ ವೃಕ್ಷಗಳನ್ನು ನಾಶ ಪಡಿಸುತ್ತಿರುವುದರಿಂದ ಮಾನವನ ನೈಸರ್ಗಿಕ ಸಂಪನ್ಮೂಲಗಳೇ ಕ್ಷೀಣಿಸುತ್ತಿವೆ. ಈ ನಾಶದಿಂದಲೇ ಮಳೆ ಬೆಳೆ ಕೆಡುತ್ತದೆ. ಬಿಸಿಲಿನ ತಾಪ ಚುರುಕಾಗುತ್ತಿದೆ. ದೂಳು ತುಂಬುತ್ತಿದೆ. ನಿರ್ಮಲ ಗಾಳಿ ಅಪರೂಪವಾಗುತ್ತಿದೆ. ಬಾವಿಗಳು ಬತ್ತುತ್ತಿವೆ. ಕೆರೆ-ಕಟ್ಟೆಗಳಲ್ಲಿ ಹೂಳು ತುಂಬುತ್ತಿವೆ. ನದಿ ಹೊಳೆಗಳು ಬಗ್ಗಡವಾಗುತ್ತಿವೆ, ಮಣ್ಣಿನ ಫಲವತ್ತತೆ ಕ್ಷೀಣಿಸುತ್ತಿದೆ. ನೆಲಕೊರಕಲು ಬೀಳುತ್ತಿದೆ. ಬೇಸಾಯ ಮುಗ್ಗರಿಸುತ್ತಿದೆ. ಬಡತನ ಹೆಚ್ಚಾಗುತ್ತಿದೆ. ಜನತೆಯ ಉತ್ಸಾಹ ಕುಗ್ಗುತ್ತಿದೆ.

ಇಂದು ಪರಿಸರ ಮಾಲಿನ್ಯ ವಿಜ್ಞಾನ ಜಗತ್ತಿಗೆ ಪರಿಹರಿಸಲಾಗದಷ್ಟು ಅಪಾಯಕಾರಿಯಾಗಿ ಬೆಳೆದಿದೆ ಎನ್ನುವುದು ನಿರ್ವಿವಾದ. ನಾಗರಿಕ ಸಮಾಜದ ಸೃಷ್ಟಿಗಾಗಿ ನಿರ್ಮಿಸಲಾಗುವ ಪ್ರತಿ ವೈಜ್ಞಾನಿಕ ಘಟಕವೂ ತನ್ನದೇ ಆದ ಕೊಡುಗೆ ನೀಡುತ್ತಿರುವುದು ವಿಜ್ಞಾನ ಜಗತ್ತಿನ ದೊಡ್ಡ ದುರಂತ. ವಿಜ್ಞಾನದ ನಿಗೂಢತೆಯನ್ನು ತಿಳಿಯ ಹೊರಟ ಮಾನವ ಅದರಲ್ಲಿ ಯಶಸ್ವಿಯೇನೋ ಆದ. ಜೊತೆಗೆ ಭಯಾನಕವಾದ ಆದರೆ ಅಷ್ಟೊಂದು ಸ್ಪಷ್ಟವಾಗಿ ಕಾಣದ ಅನೇಕ ದುರಂತಗಳಿಗೂ ಕಾರಣನಾದ. ದೇಶದ 75 ಮಿಲಿಯ ಹೆಕ್ಟೇರ್ ಪ್ರದೇಶದಲ್ಲಿ ಕಾಡು ಇದೆ ಎಂದು ಅರಣ್ಯ ಇಲಾಖೆ ಸಾರುತ್ತಿದೆ. ಇದು ದೇಶದ ಒಟ್ಟು ಭೂ ಭಾಗದಲ್ಲಿ ಶೇ. 23 ಆಗುತ್ತದೆ. ಆದರೆ ಇದು ನಿಜವಲ್ಲ ಅರಣ್ಯವೆಂದು ಸಾರುತ್ತಿರುವ ಪ್ರದೇಶದಲ್ಲಿಯೂ ಗಿಡ ಮರಗಳು ಉಳಿದಿಲ್ಲ. ಮರ ಮುಟ್ಟುಗಳಿರುವ ಕಾಡುಗಳಪ್ರಮಾಣ ದೇಶದ ಒಟ್ಟು ವಿಸ್ತಾರದ ಶೇ 12 ರಷ್ಟು ಕೂಡಇಲ್ಲ. ಕರ್ನಾಟಕ ರಾಜ್ಯದ ಅಮೂಲ್ಯ ಅರಣ್ಯಸಂಪತ್ತಿನಲ್ಲೂ ನಾವು ಶೇ 2½ ಲಕ್ಷ ಹೆಕ್ಟೇರಿನಷ್ಟನ್ನು ಕಳೆದುಕೊಂಡಿದ್ದೇವೆ. ಇದು ಕಾಯ್ದಿಟ್ಟ ಅರಣ್ಯ ಪ್ರದೇಶದ ಲೆಕ್ಕ. ಇದರಹೊರಗೆ ನಾವು ಕಳೆದು ಕೊಂಡಿರುವುದು ಸುಮಾರು 25 ಲಕ್ಷ ಹೆಕ್ಟರ್. ಸಾಗುವಳಿ, ಜಲವಿದ್ಯುತ್ ಯೋಜನೆ, ವಸತಿ, ಗಣಿ, ನಗರ ಪಟ್ಟಣ, ರಸ್ತೆ-ಕಾಲುವೆ ನಿರ್ಮಾಣ, ಪುನರ್ವಸತಿ, ಒತ್ತುವರಿ ಇತ್ಯಾದಿಗಳಿಗೆಂದು ನಮ್ಮ ಕಾಡು ಕಣ್ಮರೆಯಾಗಿ ಹೋಗಿದೆ. ಗದ್ದೆ, ಕಾಡು, ಮರ, ನದಿ, ಮಣ್ಣು ಎಲ್ಲವನ್ನು ನುಂಗಿ ಇಂದು ನಗರಗಳು ಸೃಷ್ಟಿಯಾಗಿವೆ. ಉದ್ದಿಮೆಗಳ ಅಭಿವೃದ್ಧಿಯೊಂದೇ ನಮ್ಮ ಪ್ರಧಾನ ಗುರಿಯಾಗಿರುವುದರಿಂದ ಗ್ರಾಮೀಣ ಸಂಪನ್ಮೂಲವೆಲ್ಲಾ ಬರಿದಾಗುತ್ತ ಬಂದು ಇತ್ತ ಗ್ರಾಮೀಣ ಜೀವನವೂ ದುಸ್ತರವಾಗಿ ಅತ್ತ ನಗರ ನೈರ್ಮಲ್ಯವೂ ಬರಿದಾಗಿತ್ತ ಬಂದು ಇತ್ತ ಗ್ರಾಮೀಣ ಜೀವನವೂ ದುಸ್ತರವಾಗಿ ಅತ್ತ ನಗರ ನೈರ್ಮಲ್ಯವೂ ಬೇಕಾಬಿಟ್ಟಿಯಾಗಿ ಪರಿಣಮಿಸಿದೆ. ಭೂಮಿಯ ಮಿತಿಮೀರಿದ ದುರುಪಯೋಗ ಮತ್ತು ಅಸಮರ್ಪಕ ನಿರ್ವಹಣೆಯಿಂದಾಗಿ ನಮ್ಮದೇಶದ ಒಟ್ಟು ಭೂ ಭಾಗದ ಶೇ. 53 ರಷ್ಟು ಭೂಪ್ರದೇಶ ಗಂಭೀರವಾದ ಪರಿಸರ ಮಾಲಿನ್ಯಕ್ಕೆ ತುತ್ತಾಗಿದೆ. ದಿನದಿಂದ ದಿನಕ್ಕೆ ನಮ್ಮ ಪರಿಸರ ಕಲುಷಿತ ಗೊಳ್ಳುತ್ತ ಹಲವಾರು ಕೀಟಗಳು, ಅಣುಗಳು ಸೃಷ್ಟಿಯಾಗಿ ಹೊಸಬಗೆಯ ವಿಚಿತ್ರ ಕಾಯಿಲೆಗಳನ್ನು ಉಂಟುಮಾಡುತ್ತಿವೆ. ಅರಣ್ಯ ನಾಶದಿಂದಾಗಿ ಸೌದೆಯ ಸಮಸ್ಯೆರಾಷ್ಟ್ರವ್ಯಾಪಿಯಾಗಿರುವುದರ ಜೊತೆಗೆ ರಾಷ್ಟ್ರದ ಜಲಸಂಪನ್ಮೂಲವು ಅಧ್ವಾನಕ್ಕೀಗಾಗುತ್ತಿದೆ. ಮಳೆನೀರಿನ ಶೇ. 10 ಭಾಗ ಮಾತ್ರನಾವು ಬಳಸಿಕೊಳ್ಳುತ್ತಿದ್ದು ಉಳಿದ 90 ಭಾಗ ಪ್ರವಾಹಗಳ ಮೂಲಕ ಸಮುದ್ರ ಸೇರುತ್ತಿದೆ. ಪರಮಾಣು ಸ್ಥಾವರಗಳು, ಕಾರ್ಖಾನೆಗಳು, ವಿಕಿರಣವಸ್ತುಗಳನ್ನು ಭಾರಿಪ್ರಮಾಣದಲ್ಲಿ ಪರಿಸರಕ್ಕೆ ತುಂಬುತ್ತಿವೆ. ನಾವಿಂದು ಕುಡಿಯುವನೀರು, ಸೇವಿಸುವ ಗಾಳಿ, ತಿನ್ನುವ ಆಹಾರ, ಕೇಳುವ ಶಬ್ದ ಇವುಯಾವುದೂ ನಮಗಿಂದು ಪರಿಶುದ್ಧರೂಪದಲ್ಲಿ ದೊರೆಯುತ್ತಿಲ್ಲ. ಒಟ್ಟಿನಲ್ಲಿ

ಜಲಮಾಲಿನ್ಯ, ವಾಯುಮಾಲಿನ್ಯ, ಶಬ್ದಮಾಲಿನ್ಯಗಳಿಂದ ತುಂಬಿಕೊಂಡ ಪರಿಸರವನ್ನು ನಾವಿಂದು ಕಾಣುತ್ತಿದ್ದೇವೆ. ಪರಿಸರದಲ್ಲಿ ಸಮತೋಲನ ತಪ್ಪಿದುದರ ಫಲವಿದು ನೆಲ, ಜಲ, ವಾಯುಮಾಲಿನ್ಯ ಇದೇ ರೀತಿ ಮುಂದುವರಿದದ್ದೇ ಆದರೆ ನಮ್ಮ ಅಳಿವನ್ನು ನಾವೇ ಸ್ವಾಗತಿಸಿದಂತೆಯೇ ಸರಿ.

ಮಾನವನ ಉಳಿವಿಗೆ, ಬಾಳ್ವೆಗೆ ಪರಿಸರ ಅತ್ಯಗತ್ಯವೆಂದೂ, ಪರಿಸರದ ಮಲಿನತೆಯು ವಿನಾಶದ ಅಂಚಿನಲ್ಲಿ ಮಾನವ ಬದುಕುಳಿಯಲಾರ ಎಂಬ ಅಂಶವನ್ನು ನಿಧಾನವಾಗಿಯಾದರೂ ಜನ ಈಗ ಅರಿಯಲಾರಂಭಿಸಿದ್ದಾರೆ. ಪ್ರಕೃತಿ ಕೊಳ್ಳೆ ಹೋಗುವುದನ್ನು ತಡೆಗಟ್ಟಲು ಆಗಿರುವ ನಷ್ಟವನ್ನು ಸ್ವಲ್ಪಮಟ್ಟಿಗಾದರೂ ತುಂಬಿಸಿ ಕೊಳ್ಳುವ ನಿಟ್ಟಿನಲ್ಲಿ ನಿಸರ್ಗಪ್ರೇಮಿಗಳು, ಯುವಕರು ಹಾಗೂ ಸೇವಾಸಂಸ್ಥೆಗಳು ಮುಂದೆ ಬಂದು ಜನಜಾಗೃತಿಯಲ್ಲಿ ತೊಡಗಿರುವುದು ಸಮಾಧಾನಕರ ಅಂಶ. ಈ ಕಾರ್ಯದಲ್ಲಿ ನಮ್ಮ ಸರಕಾರವೂ ಹಿಂದೆಬಿದ್ದಿಲ್ಲ.

## ಕ್ರಮಗಳು

ಇಪ್ಪತ್ತು ಅಂಶಗಳ ರಾಷ್ಟ್ರೀಯ ಕಾರ್ಯಕ್ರಮದಲ್ಲಿ ಪರಿಸರ ಸಂರಕ್ಷಣೆಗೆ ವಿಶೇಷ ಆದ್ಯತೆ ನೀಡಲಾಗಿದೆ. ಏಳನೇ ಯೋಜನೆಯಲ್ಲಿ ಪರಿಸರಶುದ್ಧೀಕರಣಕ್ಕೆ ವ್ಯಾಪಕವಾದ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಗಿದೆ ಜಲಮಾಲಿನ್ಯವನ್ನು ತಡೆಗಟ್ಟಲು ಈಗ ಕೇಂದ್ರ ಮಂಡಲಿಯೊಂದನ್ನು ಸ್ಥಾಪಿಸಲಾಗಿದೆ. ಇದರ ಮುಖ್ಯ ಕೆಲಸಗಳೆಂದರೆ ಜಲ ಹಾಗೂ ವಾಯುಮಾಲಿನ್ಯ ಉಂಟಾಗುತ್ತಿರುವುದಕ್ಕೆ ಕಾರಣಗಳನ್ನು ಪರಿಶೀಲಿಸಿ ರಕ್ಷಣಾಕ್ರಮಗಳನ್ನು ಕೈಗೊಳ್ಳುವುದು ಹಾಗೂ ಪ್ರತಿಯೊಂದು ಕೈಗಾರಿಕೆಯೂ ತನ್ನ ವ್ಯರ್ಥವಾದ ರಾಸಾಯನಿಕಗಳನ್ನು ನದಿಗಳಲ್ಲಿ ಹರಿದು ಹೋಗದಂತೆ ಎಚ್ಚರವಹಿಸುವಂತೆ ಮಾಡಲು ಕ್ರಮಕೈಗೊಳ್ಳುವುದು, ನದಿಗಳ ಹತ್ತಿರದಲ್ಲಿ, ಪಟ್ಟಣಗಳ ಮಧ್ಯಭಾಗದಲ್ಲಿ ಮತ್ತು ಜನಸಾಂದ್ರತೆ ಇರುವ ಪ್ರದೇಶಗಳಲ್ಲಿ ವಿಷಪೂರಿತ ಅನಿಲಗಳ ಸ್ಥಾವರಗಳನ್ನು ಹಾಗೂ ದೊಡ್ಡ ಕೈಗಾರಿಕೆಗಳನ್ನು ಸ್ಥಾಪಿಸುವುದನ್ನು ಈಗ ನಿಷೇಧಿಸಲಾಗಿದೆ. ಪರಿಸರ ಮಾಲಿನ್ಯವನ್ನು ಉಂಟುಮಾಡುವ 20 ದೊಡ್ಡ ಕೈಗಾರಿಕೆಗಳನ್ನು ಗುರುತಿಸಲಾಗಿದ್ದು, ಅವುಗಳಿಗೆ ಮಾಲಿನ್ಯ ನಿರೋಧಕ ಕ್ರಮಗಳನ್ನು ಅನುಸರಿಸಲು ಕಟ್ಟುನಿಟ್ಟಾಗಿ ಸೂಚಿಸಲಾಗಿದೆ. ಗಂಗಾನದಿಯ ನೀರನ್ನು ಶುದ್ಧಗೊಳಿಸಲು 7ನೇ ಯೋಜನೆಯಲ್ಲಿ ಯೋಚಿಸಲಾಗಿದ್ದು, ಅದಕ್ಕಾಗಿ 240 ಕೋಟಿರೂಗಳನ್ನು ವೆಚ್ಚಮಾಡಲಾಗುತ್ತದೆ ಜೀವಪರಿಸರ ರಕ್ಷಣೆಗೆ ಈಗ ಕ್ರಮಗಳನ್ನು ಕೈಗೊಳ್ಳಲಾಗುತ್ತಿದೆ. ಆಮೂಲಕ ವಿಶೇಷ ಮಹತ್ವವುಳ್ಳ ಹುಲಿ, ಸಿಂಹ, ಆನೆ ಮುಂತಾದ ಪ್ರಾಣಿಗಳ ಹಾಗೂ ಅಪರೂಪದ ಜೀವಜಂತುಗಳ ರಕ್ಷಣೆ ಮಾಡಲಾಗುತ್ತಿದೆ. ಇದರ ಜೊತೆಗೆ ಅರಣ್ಯೀಕರಣ, ಜಮೀನಿನ ಫಲವತ್ತತೆಯನ್ನು ರಕ್ಷಿಸಿಕೊಳ್ಳುವ ಕಾರ್ಯಗಳನ್ನು ಕೈಗೊಳ್ಳಲಾಗುತ್ತಿದೆ. ಪರಿಸರ ಶುದ್ಧೀ-

ಕರಣದ ಅಗತ್ಯತೆಯ ಬಗ್ಗೆ ಮಕ್ಕಳಿಗೆ ಪಠ್ಯಪುಸ್ತಕಗಳ ಹಾಗೂ ರೇಡಿಯೋ ಕಾರ್ಯಕ್ರಮಗಳ ಮೂಲಕ ತಿಳಿಹೇಳಲಾಗುತ್ತಿದೆ. ಪ್ರತಿವರ್ಷ ಜೂನ್ 5ರಂದು ವಿಶ್ವಪರಿಸರ ದಿನವನ್ನು ಆಚರಿಸಲಾಗುತ್ತಿದೆ. ಇದರ ಉದ್ದೇಶ ಪರಿಸರ ಮಾಲಿನ್ಯದ ಗಂಭೀರತೆ ಮತ್ತು ಅದರ ಪರಿಶುದ್ಧತೆಯ ಅವಶ್ಯಕತೆಯ ಬಗ್ಗೆ ಜನರಲ್ಲಿ ಜಾಗೃತಿ ಮೂಡಿಸುವುದು. ಪರಿಸರ ಶುದ್ಧೀಕರಣದ ಬಗ್ಗೆ ಸಂಶೋಧನೆಗಳನ್ನು ಕೈಗೊಂಡು ನಿರ್ಣಯಗಳನ್ನು ನೀಡಲೆಂದು ನಾಗಪುರದಲ್ಲೂ 'ರಾಷ್ಟ್ರೀಯ ಪರಿಸರ ಇಂಜಿನಿಯ-ರಿಂಗ್ ಸಂಶೋಧನ ಸಂಸ್ಥೆ' (The National Environment Engin-eering research Institute) ಯನ್ನು ಸ್ಥಾಪಿಸಲಾಗಿದೆ. 198· ರಿಂದ ಭಾರತ ಸರಕಾರ ಮತ್ತು ರಾಜ್ಯಸರಕಾರಗಳು ಸಾಮಾಜಿಕ ಅರಣ್ಯಯೋಜನೆಯನ್ನು ಅನುಷ್ಠಾನಕ್ಕೆ ತಂದಿವೆ. ಅರಣ್ಯ ಪ್ರದೇಶವನ್ನು ಬಿಟ್ಟು ಉಳಿದ ಸ್ಥಳಗಳಲ್ಲಿ ಜನತೆಯ ಸಹಕಾರದೊಂದಿಗೆ ಹೊಸದಾಗಿ ಗಿಡ ಮರಗಳನ್ನು ಬೆಳೆಸುವುದರ ಮೂಲಕ ಅರಣ್ಯ ಉತ್ಪನ್ನಗಳನ್ನು ಪಡೆಯುವ ಉದ್ದೇಶವನ್ನು ಈ ಯೋಜನೆ ಹೊಂದಿದ್ದು, ಇದಕ್ಕಾಗಿ ಹಲವಾರು ವಿಶಿಷ್ಟ ಕಾರ್ಯಕ್ರಮಗಳನ್ನು ಕೈಗೊಳ್ಳಲಾ-ಗುತ್ತಿದೆ. ಕರ್ನಾಟಕದಲ್ಲಿ ಈ ಯೋಜನೆ ಹೆಚ್ಚಿನ ಮಹತ್ವಪಡೆದಿದ್ದು ಸುಮಾರು 20 ದಶಲಕ್ಷ ಜನಸಂಖ್ಯೆಯುಳ್ಳ 130 ತಾಲ್ಲೂಕುಗಳ ಒಟ್ಟು 19560 ಹಳ್ಳಿಗಳು ಈ ಯೋಜನೆಯ ತೀವ್ರ ಕಾರ್ಯಕ್ರಮಕ್ಕೆ ಒಳಪಟ್ಟಿವೆ. ಕರ್ನಾಟಕದ ಪರಿಸರ ಇಲಾಖೆಯು ಜನಸಾಮಾನ್ಯರಲ್ಲಿ ಪರಿಸರ ಪ್ರಜ್ಞೆಯನ್ನು ಮೂಡಿಸಲು ನಾನಾ ಕಾರ್ಯಗಳನ್ನು ಕೈಗೊಳ್ಳುತ್ತಿದೆ. ಇತ್ತೀಚೆಗೆ ಈ ಇಲಾಖೆ ಪ್ರಕಟಿಸಿದ ಕರ್ನಾಟಕದ ಪರಿಸರ ಪರಿಸ್ಥಿತಿ ಒಂದು ಉತ್ತಮ ದಾಖಲೆಯಾಗಿದೆ.

ಆರನೇ ಯೋಜನೆಯಲ್ಲಿ ಪರಿಸರ ಸಂರಕ್ಷಣೆಗಾಗಿ 40.05 ಕೋಟಿ ರೂ ವೆಚ್ಚ ಮಾಡಲಾಯಿತು. ಏಳನೆ ಯೋಜನೆಯಲ್ಲಿ ಇದಕ್ಕಾಗಿ 4-7.91 ಕೋಟಿರೂ-ಗಳನ್ನು ಮಾಡಲಾಗುತ್ತದೆ. ಇವು ಪರಿಸರದ ಬಗ್ಗೆ ಸರಕಾರಕ್ಕಿರುವ ಕಾಳಜಿಯನ್ನು ತೋರಿಸುತ್ತವೆ. ಇದರ ಜೊತೆಗೆ ಪರಿಸರದ ಬಗ್ಗೆ ಆಸಕ್ತಿ ಇರುವ ಉತ್ಸಾಹಿ ಜನತೆ ಸೇವಾ ಸಂಸ್ಥೆಗಳು ಹಾಗೂ ಸಮೂಹ ಮಾಧ್ಯಮಗಳು ಈ ಪ್ರಯತ್ನವನ್ನು ಬೆಳೆಸಿ ಪೋಷಿಸಿದಲ್ಲಿ ಪರಿಸರ ಸಂರಕ್ಷಣೆ ಸಾಧ್ಯವಾದೀತು.

  

## ಒಂದು ಮನವಿ

ಆಜೀವ ಸದಸ್ಯರುಗಳು ತಮ್ಮ ಬದಲಾದ ವಿಳಾಸಗಳನ್ನು ಪತ್ರಿಕಾ ಕಾರ್ಯಾಲಯಕ್ಕೆ ಬರೆದು ತಿಳಿಸಲು ಕೋರಿದೆ. "ಸಿದ್ಧಗಂಗಾ" ನಿಮಗೆ ಕ್ರಮವಾಗಿ ತಲುಪಲು ಸ್ಪಷ್ಟ ವಿಳಾಸ ಅಗತ್ಯ ತಪ್ಪದೆ ತಿಳಿಸಿ.

# ವಿಶ್ವ ಆಹಾರ ಮತ್ತು ಪರಿಸರ

ಜಿ. ಆರ್. ರಂಗಸ್ವಾಮಯ್ಯ, ಕನ್ನಡ ವಿಭಾಗ. ಭಾರತೀಯ ಕೃಷಿ ಸಂಶೋಧನಾ ಸಂಸ್ಥೆ ಹೊಸದೆಹಲಿ.

## 1. ಪರಿಸರವನ್ನು ಕೆಡಿಸದಂತೆ ಆಹಾರೋತ್ಪಾದನೆಯನ್ನು ಹೆಚ್ಚಿಸಿ

ವಿಶ್ವಾದ್ಯಂತ ೧೫೦ ಕ್ಕೂ ಹೆಚ್ಚು ದೇಶಗಳಲ್ಲಿ ಲಕ್ಷಾಂತರ ಜನರು ಪ್ರತಿ ವರ್ಷ ಅಕ್ಟೋಬರ್ ೧೬ ರಂದು ವಿಶ್ವ ಆಹಾರ ದಿನವನ್ನು ಆಚರಿಸುತ್ತಾರೆ. ನಲವತ್ತಾನಾಲ್ಕು ವರ್ಷಗಳ ಹಿಂದೆ ಇದೇ ದಿನದಂದು ವಿಶ್ವ ಆಹಾರ ಮತ್ತು ಕೃಷಿ ಸಂಸ್ಥೆ (ಎಫ್ ಎ ಒ) ಯನ್ನು ಸ್ಥಾಪಿಸಲಾಗಿತ್ತು. ಈದಿನದನೆನಪಿಗಾಗಿ ೧೯೮೧ ರಿಂದ ಈ ದಿನವನ್ನು ಆಚರಿಸುತ್ತಾ ಬರಲಾಗಿದೆ. ವಿಶ್ವದ ಆಹಾರ ಪರಿಸ್ಥಿತಿಯ ಬಗ್ಗೆ ಜನಜಾಗೃತಿಯುಂಟು ಮಾಡುವುದು ಹಾಗೂ ಹಸಿವಿನ ವಿರುದ್ಧದ ಹೋರಾಟದಲ್ಲಿ ಜನರು ಪಾಲ್ಗೊಳ್ಳುವಂತೆ ಮಾಡುವುದು ಇದರ ಮುಖ್ಯ ಉದ್ದೇಶವಾಗಿದೆ,

ನ್ಯೂನಪೋಷಣೆಗೂ ಬಡತನಕ್ಕೂ ತುಂಬಾ ಹತ್ತಿರದ ಸಂಬಂಧವಿದೆ ನ್ಯೂನ ಪೋಷಣೆಯನ್ನು ನಿವಾರಿಸಬೇಕಾದರೆ ಬಡತನವನ್ನೂ ನಿವಾರಿಸಬೇಕು. ಇದು ಸಾಧ್ಯ ವಾಗಬೇಕಾದರೆ ವಿಶ್ವಾದ್ಯಂತ ಪ್ರತಿಯೊಬ್ಬನೂ, ಪ್ರತಿಯೊಂದು ಸಂಘ-ಸಂಸ್ಥೆಗಳೂ ಬಡತನದ ವಿರುದ್ಧ ಹೋರಾಡಬೇಕು. ೧೯೮೯ ರ ವಿಶ್ವ ಆಹಾರ ದಿನಕ್ಕೆ ಈ ವರ್ಷ ಆಹಾರ ಮತ್ತು ಪರಿಸರ ಎಂಬ ವಿಷಯವನ್ನು ಆರಿಸಿಕೊಳ್ಳಲಾಗಿದೆ, ಕೃಷಿ, ಅರಣ್ಯ ಸಂಪತ್ತು ಹಾಗೂ ಮೀನುಗಾರಿಕೆ ಇವುಗಳಲ್ಲಿ ತಾಳ-ಮೇಳ ವಿಲ್ಲದಿದ್ದರೆ ಪರಿಸರ ಹದಗೆಟ್ಟು ಮುಂದಿನ ಪೀಳಿಗೆ ಮುನ್ನ ನಾವು ಪೋಷಿಸುವುದು ದುಸ್ಸಾಧ್ಯವಾಗುತ್ತದೆ ಮಣ್ಣು ಮತ್ತು ನೀರಿನ ಉತ್ಪಾದನಾ ಕ್ಷಮತೆಯನ್ನು ನಾವು ಕಾಪಾಡಿಕೊಳ್ಳಬೇಕಾಗಿದೆ ಜನಸಂಖ್ಯೆ ಹೆಚ್ಚಾದಂತೆ ನೀರು ಮತ್ತು ಭೂಮಿಯ ಬಳಕೆ ಹೆಚ್ಚುತ್ತದೆ, ಜೊತೆಗೆ ಇವುಗಳ ಉತ್ಪಾದನಾ ಕ್ಷಮತೆಯೂ ಇಳಿಮುಖವಾಗುತ್ತದೆ. ಪರಿಸರ ಮಾಲಿನ್ಯ ಹೆಚ್ಚು ತ್ತದೆ. ಇದನ್ನು ತಪ್ಪಿಸಿ ಇರುವ ಸಂಪನ್ಮೂಲಗಳನ್ನು ಹಿತ ಮಿತವಾಗಿ, ಬುದ್ಧಿವಂತಿ ಕೆಯಿಂದ ಬಳಸಿಕೊಳ್ಳದಿದ್ದರೆ ನಾವು ನಿಂತಿರುವ ಕೊಂಬೆಗೆ ಕೊಡಲಿ ಹಾಕಿದಂತಾಗುತ್ತದೆ.

ಕೈಗಾರಿಕೀಕರಣವು ವಿಶ್ವಾದ್ಯಂತ ಪರಿಸರವನ್ನು ಹದಗೆಡಿಸಿದೆ. ಸಂಸ್ಕರಿಸದೆ ಇರುವ ಅನಿಲಗಳು ವಾತಾವರಣಕ್ಕೆ ಲಗ್ಗೆ ಹಾಕಿ.

## 2. ಮುಂದಿನ ಪೀಳಿಗೆ 'ಪರಿಸರ ನಿರಾಶ್ರಿತ' ರಾಗುವುದನ್ನು ತಪ್ಪಿಸಿ.

ನಮ್ಮ ಅರಣ್ಯ ಸಂಪತ್ತು ತೀವ್ರಗತಿಯಲ್ಲಿ ಕಾಣೆಯಾಗುತ್ತಿದೆ. ಭಾರತದ ಅರಣ್ಯ ಸಮೀಕ್ಷೆಯ ಪ್ರಕಾರ ೬೪.೨ ದಶಲಕ್ಷ ಹೇಕ್ಟೆರುಗಳಷ್ಟು ಅರಣ್ಯ ಸಂಪತ್ತು ಈಗ ಉಳಿದಿದೆ. ಇದು ಸರ್ಕಾರಿ ಕಡಿತಗಳ ಅಂಕಿಅಂಶ. ಯತಾರ್ಥಬೇರೆಯೇ

ಇದೆ, ಒಂದು ದೇಶದ ಪರಿಸರ ಆರೋಗ್ಯ ಕರವಾಗಿರಬೇಕಾದರೆ, ಅಲ್ಲಿಯ ಜನ ಸುಖವಾಗಿರಬೇಕಾದರೆ, ಸಕಾಲದಲ್ಲಿ ಮಳೆ-ಬೆಳೆಗಳು. ಆಗ ಬೇಕಾದರೆ ಶೇಕಡ ೩೩ ರಷ್ಟಾದರೂ ಅರಣ್ಯ ಸಂಪತ್ತು ಇರಬೇಕು. ಆದರೆ ನಮ್ಮ ಒಟ್ಟು ಭೌಗೋಳಿಕ ಪ್ರದೇಶದಲ್ಲಿ ಶೇಕಡ ೧೯-೨೨ ರಷ್ಟು ಮಾತ್ರ ಅರಣ್ಯ ಸಂಪತ್ತು ಉಳಿದಿದೆ ನಮಗೆ ವಾರ್ಷಿಕವಾಗಿ ೨೩೫ ದಶಲಕ್ಷ ಕ್ಯೂಬಿಕ್ ಮೀಟರ್‌ಗಳಷ್ಟು ಸೌದೆ ಬೇಕಾಗಿದೆ. ಆದರೆ ದೊರೆಯುತ್ತಿರುವುದು ೪೦ ದಶಲಕ್ಷ ಕ್ಯೂಬಿಕ್ ಮೀಟರ್-ಗಳಷ್ಟು ತೊಂಬತ್ತು ದಶಲಕ್ಷ ದನ-ಕರುಗಳು ಕಾಡಿನಲ್ಲಿ ಮೇಯುತ್ತಿವೆ. ಎರಡು ಸಾವಿರದ ಇಸ್ವಿ ಹೊತ್ತಿಗೆ ನಮಗೆ ೧೦೦ ದಶಲಕ್ಷ ಟನ್ ಸೌದೆ ಬೇಕಾಗುತ್ತದೆ. ಇದೇರೀತಿ ದನ-ಕರುಗಳಿಗೆ ಮೇವು ಬೇಕಾಗುತ್ತದೆ. ಜನಸಂಖ್ಯೆ ಹೀಗೇ ಹೆಚ್ಚುತ್ತ ಹೋದರೆ, ನಗರೀಕರಣ ಇದೇ ಗತಿಯಲ್ಲಿ ಮುಂದುವರಿದರೆ ಮುಂದಿನ ಪೀಳಿಗೆ ಅಪಾಯಕಾರಿ ಹಂತಕ್ಕೆ ಮುಟ್ಟುತ್ತದೆ.

ಅರಣ್ಯ ಸಂರಕ್ಷಣೆ, ಹೆಚ್ಚು ಹೆಚ್ಚು ಮರ-ಗಿಡಗಳನ್ನು ಬೆಳೆಯುವುದು ಸೌದೆ ಗಾಗಿ ಬೇರೆ ಶಕ್ತಿ ಮೂಲಗಳನ್ನು ಜನತೆಗೆ ಅಗ್ಗದ ದರದಲ್ಲಿ ದೊರೆಯುವಂತೆ ಮಾಡುವುದು ಇಂದಿನ ಆವ್ಯತೆಯಾಗಾಬೇಕು. ಇಲ್ಲದೆ ಹೋದರೆ ಮುಂದಿನ ಶುದ್ಧ ಪರಿಸರದಿಂದ ವಂಚಿತರಾದ 'ಪರಿಸರ ನಿರಾಶ್ರಿತ' ರಾಗುತ್ತಾರೆ.

ಗಿಡ-ಮರಗಳು ಮತ್ತು ಅರಣ್ಯಸಂಪತ್ತನ್ನು ಹಾಳುಮಾಡುತ್ತಿವೆ. ನಾವು ಉಸಿರಾಡುವ ಗಾಳಿಯಲ್ಲಿ ಅಪಾಯಕಾರಿ ಅನಿಲಗಳು ಸೇರುತ್ತಿವೆ ಕಾರ್ಬನ್ ಡೈಆಕ್ಸೈಡ್ ಮತ್ತು ಇತರ ಮಾರಕ ಅನಿಲಗಳಿಂದ ರಕ್ಷಾಕವಚದಂತಿರುವ ಓಜೋನ್ ಕವಚ ಹಾಳಾಗಿ ಮಾನವ, ಪ್ರಾಣಿ ಹಾಗೂ ಸಸ್ಯ ಸಂಕುಲಕ್ಕೆ ಇದು ಕಂಟಕ ಪ್ರಾಯವಾಗುತ್ತಿದೆ

ಬಡತನದಿಂದಾಗಿ ಸಾಗುವಳಿ ಮಾಡುವ ಆಸೆಯಿಂದಲೋ, ಅಡಿಗೆಗಾಗಿ ಸೌದೆಗೊ ದನ-ಕರುಗಳನ್ನು ಮೇಯಿಸಲೋ ಅರಣ್ಯಗಳು ನಾಶವಾಗುತ್ತಾ ಹೋಗುತ್ತಿವೆ. ಕೈಗಾರಿಕೋದ್ಯಮಿಗಳ ಬೊಜ್ಜು ಬೆಳೆಸಲು, ಕೈಗಾರಿಕೆಗಳಿಗೆ ಕಚ್ಚಾ ವಸ್ತುಗಳನ್ನು ಒದಗಿಸುವ ನೆಪದಲ್ಲಿ ಸುವ್ಯವಸ್ಥಿತ ರೀತಿಯಲ್ಲಿ ಅರಣ್ಯಗಳು ನಾಶವಾಗುತ್ತಿದೆ. ಹೀಗೆ ಪ್ರತಿವರ್ಷವೂ ಲಕ್ಷಾಂತರ ಹೆಕ್ಟೇರುಗಳ ಅರಣ್ಯ ಕಾಣೆಯಾಗುತ್ತಿದೆ.

ಹೊಟ್ಟೆಗೆ ಹಿಟ್ಟಿಲ್ಲದೆ ಉಳಿಯುವುದು ಕಷ್ಟವಾದರೂ ಭೂಮಿಯ ಮೇಲಿನ ಶುದ್ಧ ನೀರು, ಪರಿಸರವಿಲ್ಲದೆಯೂ ಆರೋಗ್ಯಕರವಾಗಿ ಬದುಕುವುದು ಕಷ್ಟ. ಮಣ್ಣಿನ ಫಲವತ್ತತೆಯನ್ನು ಹಾಳುಮಾಡದೆ, ಪರಿಸರವನ್ನು ಹದಗೆಡಿಸದೆ ಈ ಮನುಕುಲದ ಸವಾಲನ್ನು ನಾವಿಂದು ಸ್ವೀಕರಿಸಬೇಕಾಗಿದೆ. ಇದು ಸಾಧ್ಯವಾಗಬೇಕಾದರೆ ರಾಜ ಕೀಯ ನಿರ್ಧಾರ, ಆರ್ಥಿಕ ಬೆಂಬಲ, ಗ್ರಾಮೀಣ ಮತ್ತು ನಗರ ಪ್ರದೇಶಗಳ ಜನ

ಸಹಕಾರ, ಅವಶ್ಯಕ ತಾಂತ್ರಿಕ ಹಾಗೂ ವೈಜ್ಞಾನಿಕ ಜ್ಞಾನ ಬೇಕು. ಸಂಬಂಧಿಸಿದ ಸಚಿವಾಲಯಗಳ ನಡುವೆ ಸಾಮರಸ್ಯವೇರ್ಪಡಬೇಕು. ಕೀಟನಾಶಕಗಳ ಬಳಕೆಯ ಬಗ್ಗೆ ಅಂತರ ರಾಷ್ಟ್ರೀಯ ಮಟ್ಟದಲ್ಲಿ ನೀತಿಸಂಹಿತೆಯನ್ನು ರೂಪಿಸಬೇಕು. ಈ ಸಂಬಂಧದಲ್ಲಿ ಜನರಲ್ಲಿ ತಿಳುವಳಿಕೆ ಮೂಡುವಂತೆ ಕರಪತ್ರಗಳು ಕೈಪಿಡಿಗಳು ಮುಂತಾದುವನ್ನು ಸ್ಥಳೀಯ ಭಾಷೆಗಳಲ್ಲೇ ಸಿದ್ಧಪಡಿಸಿ ಜನರಿಗೆ ಮುಟ್ಟಿಸಬೇಕು. ಪರಿಸರ ಸಂರಕ್ಷಣೆಯ ಬಗ್ಗೆ ಹಾಗೂ ಆರೋಗ್ಯಕರ ಕೃಷಿ ಪದ್ಧತಿಗಳ ಬಗ್ಗೆ ತರಬೇತಿ ಶಿಬಿರಗಳನ್ನು ಮಾಡುವ ವ್ಯವಸ್ಥೆಯಾಗಬೇಕು.

4. ಆಹಾರೋತ್ಪಾದನೆ ಆರೋಗ್ಯಕರವಾಗಿರಲಿ

ಸಾಕಷ್ಟು ಆಹಾರೋತ್ಪಾದನೆ ಮಾಡಿದರೆ ಆಹಾರದ ಸಮಸ್ಯೆ ಬಗೆಹರಿದಂತೆಲ್ಲ. ಉತ್ಪಾದಿಸಿದ ಆಹಾರ ಆರೋಗ್ಯಕರವಾಗಿರಬೇಕು, ಇದರಿಂದ ಅನುಕೂಲಕ್ಕೆ, ಪ್ರಾಣಿ, ಪಕ್ಷಿ, ಜಲ-ಚರಗಳಿಗೆ, ಅರಣ್ಯಗಳಿಗೆ ಕೇಡಾಗಬಾರದು. ಉತ್ಪಾದಿಸಿದ ಆಹಾರ ಪೌಷ್ಟಿಕಾಂಶಗಳಿಂದ ಕೂಡಿರಬೇಕು. ಇದನ್ನು ಉತ್ಪಾದಿಸಿದ ಮಣ್ಣು ನಂಜುಕಾರಕವಾಗಿ ತಿಂದ ಜನ ರೋಗಿಷ್ಠರಾದರೆ ಪ್ರಯೋಜನವಾದರೂ ಏನು?

ಉತ್ಪಾದಿಸಿದ ಆಹಾರವನ್ನು ಸರಿಯಾಗಿ ಸಂಗ್ರಹಿಸದೆ, ಸಂಸ್ಕರಿಸದೆ, ಸುರಕ್ಷಿತವಲ್ಲದ ಔಷಧಿಗಳ ಬಳಕೆಯಿಂದ, ಕೀಟನಾಶಕಗಳು ಮತ್ತು ರಸಗೊಬ್ಬರಗಳನ್ನು ಸರಿಯಾಗಿ ಬಳಸದೆ, ಕೈಗಾರಿಕೆಗಳು ಮತ್ತು ಇತರ ಮೂಲಗಳಿಂದ ಹೊರಬರುವ ಕಲುಷಿತ ವಸ್ತುಗಳಿಂದ, ರಾಸಾಯನಿಕ ಅನಿಲಗಳಿಂದ ಹಾಳುಮಾಡುತ್ತಿದ್ದೇವೆ. ಇದು ಆರೋಗ್ಯಕರ ಕೃಷಿ ವ್ಯವಸ್ಥೆಯಲ್ಲ.

ಆಹಾರ ರೋಗಕಾರಕವಾಗದಂತೆ ತಡೆಯಬೇಕು. ಉತ್ತಮ ರೀತಿಯ ಸಂಗ್ರಹಣಾ, ಸಂಸ್ಕರಣಾ ವ್ಯವಸ್ಥೆ ಕಡಿಮೆ ವೆಚ್ಚದಲ್ಲಿ ಸಾಧ್ಯವಾಗುವಂತಾಗಬೇಕು. ಕೆಲವೊಂದು ರಸಗೊಬ್ಬರಗಳ ಮಿತವಾದ ಬಳಕೆಯಾಗಬೇಕು, ಜೈವಿಕ ಗೊಬ್ಬರಗಳ ಬಳಕೆ ಹೆಚ್ಚಬೇಕು, ಸಾರಜನಕವನ್ನು ಅಳವಡಿಸುವ ಜೀವಿಗಳ ಹೆಚ್ಚು ಹೆಚ್ಚು ಬಳಕೆಯಾಗಬೇಕು ಕೀಟ ನಿರೋಧಕ, ರೋಗನಿರೋಧಕ ತಳಿಗಳ ಬಳಕೆ ಹೆಚ್ಚಾಗಬೇಕು ರಾಸಾಯನಿಕ ಗೊಬ್ಬರಗಳು ಹಾಗೂ ಔಷಧಿಗಳ ಉತ್ಪಾದನೆಯನ್ನು ಹೆಚ್ಚಿಸುವುದರ ಜೊತೆ ವಿನಾಶಕಾರಿ ಪರಿಣಾಮಗಳನ್ನು ಉಂಟುಮಾಡುತ್ತವೆಂಬುದನ್ನು ರೈತರು ಗಮನದಲ್ಲಿರಿಸಿಕೊಳ್ಳಬೇಕು.

## 5. ಮಣ್ಣು ನೀರಿನ ಋಣವನ್ನು ತೀರಿಸೋಣ.

ಹಸಿವಿನ ವಿರುದ್ಧದ ಹೋರಾಟವೇ ಮನುಕುಲದ ಹೋರಾಟ, ಜನರಿಗೆ ಸಾಕಷ್ಟು ಪೌಷ್ಟಿಕ ಆಹಾರ ಒದಗಿಸಬೇಕೆಂಬ ಹಂಬಲ ಎಲ್ಲ ದೇಶಗಳಿಗೂ ಇದ್ದೇ ಇದೆ. ಇದೊಂದು ಮಹಾ ಸಾಹಸ. ಈ ಹೋರಾಟವಲ್ಲಿ ಗೆಲುವು ನಮ್ಮದಾಗಬೇಕಾದರೆ ಕೃಷಿ, ಮೀನುಗಾರಿಕೆ ಮತ್ತು ಅರಣ್ಯಕೃಷಿ ಇವುಗಳಲ್ಲಿ ಸಮನ್ವಯ ಏರ್ಪಡಬೇಕು. ಇವುಗಳಿಂದ ನಾವು ಪಡೆದದ್ದಕಿಂತ ಹೆಚ್ಚು ನೀಡುವಂತಾಗಬೇಕು. ಆಗ ಮಾತ್ರ ಮಣ್ಣು-ನೀರಿನ ಋಣವನ್ನು ಮಾನವ ಜನಾಂಗ ತೀರಿಸಿದಂತಾಗುತ್ತದೆ. ಮುಂದಿನ ಪೀಳಿಗೆಯ ಕ್ಷಮೆಗಾದರೂ ನಾವು ಅರ್ಹರಾಗುತ್ತೇವೆ. ನಾವಿರುವ ಈ ಗ್ರಹದ ಸಕಲ ಜೀವಿಗಳಿಗೂ ಪ್ರಾಣದಾನ ಮಾಡಿರುವ ಸ್ವಾಭಾವಿಕ ಸಂಪನ್ಮೂಲಗಳನ್ನು ನಾವು ದುರುಪಯೋಗಪಡಿಸಿ ಕೊಳ್ಳುತ್ತಿದ್ದೇವೆ; ಪರಿಸರದ ಸಮತೋಲನವನ್ನು ಹಾಳುಗೆಡವುತಿದ್ದೇವೆ; ಸ್ವಂತ ಮನೆಗೇ ಬೆಂಕಿ ಹಚ್ಚಿಕೊಳ್ಳುತ್ತಿದ್ದೇವೆ.

ಕೈಗಾರಿಕೀರಣ, ಅಭಿವೃದ್ಧಿ, ಹಸಿವೆ, ಬಡತನ ಮತ್ತು ಪರಿಸರ ಮಾಲಿನ್ಯ ಇವು ಪರಸ್ಪರ ಸಂಬಂಧ ಹೊಂದಿವೆ. ಎಲ್ಲ ದೇಶಗಳಲ್ಲೂ, ಎಲ್ಲ ಪ್ರಾಂತಗಳಲ್ಲೂ, ಎಲ್ಲ ಜನರಲ್ಲೂ ಇವು ಒಂದಲ್ಲ ಒಂದು ರೀತಿ ಸಮಸ್ಯೆಗಳನ್ನು ಹುಟ್ಟು ಹಾಕಿವೆ. ಇವು ಜೀವಿ ಸಂಕುಲದ ಉಳಿವಿಗೇ ಸವಾಲಾಗಿ ನಿಂತಿವೆ; ಬರಲಿರುವ ವರ್ಷಗಳಲ್ಲಿ ಸೆಡಂಭೂತವಾಗಲಿವೆ. ಮುಂದಿನ ಪೀಳಿಗೆಗಾಗಿ ಈ ಗ್ರಹವನ್ನು ಆರೋಗ್ಯಕರವಾಗಿ ಕಾಪಾಡಿಕೊಳ್ಳುವ ವಾರಸುದಾರರಾಗಿದ್ದೇವೆಂಬುದನ್ನು ನಾವು ಮರೆಯಬಾರದು. ನಾವಿರುವುದು ಒಂದೇ ನೆಲದಲ್ಲಿ, ನಾವೆಲ್ಲ ಒಂದೇ ಕುಲ: ನಮಗಿರುವುದ ಒಂದೇ ಭವಿಷ್ಯ-ಎಂಬುದುದನ್ನು ಎಲ್ಲರೂ ಮನಗಾಣ ಬೇಕಾಗಿದೆ.

### —: ಓದುಗರ ಗಮನಕ್ಕೆ :—

ಅನೇಕ ಆಜೀವ ಸದಸ್ಯರುಗಳ ವಿಳಾಸಗಳು ಬದಲಾಗಿರುವುದರಿಂದ ಅವರುಗಳಿಗೆ
ಪತ್ರಿಕೆಯ ಸಂಚಿಕೆಗಳು ತಲುಪದೇ ಹಿಂತಿರುಗುತ್ತಿವೆ. ಆಗಿಂದಾಗ್ಗೆ
ನಿಮ್ಮ ಸರಿಯಾದ ವಿಳಾಸವನ್ನು ಕೊಟ್ಟು "ಸಿದ್ಧಗಂಗಾ"
ನಿಮಗೆ ತಲುಪುವಂತೆ ನಮ್ಮೊಂದಿಗೆ ಸಹಕರಿಸಲು
ವಿನಂತಿ.

# ಡಾ॥ ಜಾನ್ ಡ್ಯೂಯಿಯ ಶಿಕ್ಷಣದ ಗುರಿಗಳು

(ಹಿಂದಿನ ಸಂಚಿಕೆಯಿಂದ ಮುಂದುವರಿದಿದೆ)

ನಮ್ಮ ಆಧುನಿಕ ಜಗತ್ತು ನಿರಂತರವಾಗಿ ಬದಲಾವಣೆ ಹೊಂದುತ್ತಾ ಕ್ರಿಯಾತ್ಮಕವಾಗಿ ಮುಂದೆ ಸಾಗುತ್ತಿರುವುದರಿಂದ ಶಿಕ್ಷಣದ ಗುರಿಗಳನ್ನು ಮೊದಲೇ ನಿರ್ಧರಿಸುವುದು ನಮಗೆ ಕಷ್ಟವಾಗುವುದು. ಮಗುವಿನ ಭವಿಷ್ಯವನ್ನು ನಾವು ಇಂದೇ, ಹೀಗೆ ಇರುತ್ತದೆ, ಎಂಬುದನ್ನು ತಿಳಿಯಲು ಸಾಧ್ಯವಿಲ್ಲ. ಈ ಹಿನ್ನೆಲೆಯಲ್ಲಿ ಇರುವ ಪ್ರತಿಪಾದಿಸಿದ ಶಿಕ್ಷಣದ ಗುರಿಗಳು ಈ ರೀತಿ ಇವೆ.

1 ತಾತ್ಕಾಲಿಕ ಗುರಿಗಳು
2 ಅಂತಿಮ ಗುರಿಗಳು
3 ಸಾಮಾಜಿಕ ದಕ್ಷತೆಯಗುರಿ

ತಾತ್ಕಾಲಿಕ ಗುರಿ ಎಂದರೆ ಪ್ರಸಕ್ತ ಸನ್ನಿವೇಶಕ್ಕೆ ಮತ್ತು ಇಂದಿನ ಮಗುವಿನ ಜೀವನಕ್ಕೆ ಸೂಕ್ತವಾದ ಮುಂದಿನ ಒಂದೇ ಒಂದು ಹಂತದಲ್ಲಿ ಕಾಣಬಹುದು ಉಪಯುಕ್ತವಾದಗುರಿ. ಬಹಳ ಮುಂದಿನದನ್ನು ಯೋಚಿಸುವುದು ಸೂಕ್ತವಲ್ಲ. ಇದರಲ್ಲಿ ಎರಡು ರೀತಿಯ ಗುರಿಗಳು

ಅ) ತನ್ನ ಇಂದಿನ ಪರಿಸರವನ್ನು ಮಗವು ಸರಿಯಾಗಿ ನಿಭಾಯಿಸಿಕೊಂಡು ಹೋಗುವಂತೆ ಮಾಡುವಂತೆ ಮಾಡುವ ಶಿಕ್ಷಣದ ಗುರಿ.

ಆ) ಪ್ರಸ್ತುತ ಜೀವನವನ್ನು ಮಗುವು ಸಮೃದ್ಧಿ ಗೊಳಿಸುವಂತೆ ಮಾಡಿಕೊಳ್ಳುವ ಗುರಿ.

ಅ) ಇಂದಿನ ಸಾಮಾಜಿಕ ನಡೆ, ನುಡಿ, ಮತ್ತು ಜೀವನದರೀತಿ ನೀತಿಗಳನ್ನು ಮಗುವು ಚೆನ್ನಾಗಿ ಅರಿಯುವಂತೆ ಶಿಕ್ಷಣ ಶ್ರಮಿಸ ಬೇಕು. ಇದಕ್ಕೆ ಬೇಕಾದ ಸೂಕ್ತವಾದ ಹೊಂದಾಣಿಕೆ ಮಾಡಿಕೊಂಡು ಮಗುವು ಸಮಾಜದ ಜೊತೆ ಸುಖವಾಗಿ ಬಾಳಬೇಕು. ಇದಕ್ಕೆ ಬೇಕಾದ ಅರಿವು ಮತ್ತು ಮಾರ್ಗದರ್ಶನವನ್ನು ಶಿಕ್ಷಣವು ಮಗುವಿಗೆ ನೀಡಬೇಕು. ಇದು ಒಂದು ಶಿಕ್ಷಣದ ಗುರಿಯಾಗ ಬೇಕು.

ಆ) ಮಗುವಿನ ಪ್ರಸ್ತುತ ಬದುಕು ಉತ್ತಮವಾಗಿರಬೇಕು. ಸುಖಕರವಾಗಿರಬೇಕು ಮತ್ತು ಸಮೃದ್ಧವಾಗಿರಬೇಕು. ಇದಕ್ಕೆ ಬೇಕಾಗುವ ಬೌದ್ಧಿಕ ಶಕ್ತಿ ಸಾಮರ್ಥ್ಯ ಮತ್ತು ಹೃದಯ ವಂತಿಕೆಯನ್ನು ಬೆಳೆಸಬೇಕು. ಈ ಗುಣಗಳು ಕೇವಲ ತನ್ನ ಬದುಕಿನ್ನಷ್ಟೇ ಸಮೃದ್ಧ ಗೊಳಿಸಲು ಸೀಮಿತವಾಗದೆ, ಸಾಮಾಜಿಕ ಒಳಿತನ್ನು ಸಹ ಸಾಧಿಸಲು ಉಪಯುಕ್ತವಾಬೇಕು. ಇಂತಹ ಅರಿವನ್ನು ಉಂಟುಮಾಡಿ ಮಗುವಿನ ಇಂದಿನ ಬದುಕನ್ನು ಸಮೃದ್ಧಿಗೊಳಿಸಲು ಶಿಕ್ಷಣ ಶ್ರಮಿಸಬೇಕು, ಇದು ಶಿಕ್ಷಣದ ಗುರಿಯಾಗ ಬೇಕು.

## ಶಿಕ್ಷಣದ ಅಂತಿಮಗುರಿ

ನಿರಂತರವಾಗಿ ಮಗುವನ್ನು ಬೆಳೆಯುವಂತೆ ಮಾಡುವ ಗುರಿಯೇ ಶಿಕ್ಷಣದ ಅಂತಿಮಗುರಿ. ಶಿಕ್ಷಣವನ್ನು ಪಡೆಯುತ್ತಾ ಮುಂದೆ ಸಾಗಿದಂತೆಲ್ಲಾ ಸರಿಯಾದ ಗುರಿಗಳ ಅರಿವು ನಮಗೇ ಗೊತ್ತಾಗುತ್ತವೆ. ಎಲ್ಲವನ್ನು ಮೊದಲೇ ನಿರ್ಧರಿಸುವುದು ಸೂಕ್ತವಲ್ಲ ಮಗುವಿನ ಮುಂದಿನ ಭವಿಷ್ಯ ಯಾವರೀತಿಯಲ್ಲಿರುತ್ತದೆ ಅದಕ್ಕೆ ಬೇಕಾದ ಪರಿಕರಗಳೇನು ? ಎಂಬುದನ್ನು ನಾವು ಇಂದು ನಿಖರವಾಗಿ ತಿಳಿಯುವುದು ಸಾಧ್ಯವಿಲ್ಲ. ಇಂದಿನ ಆಧುನಿಕ ಜಗತ್ತು ನಿರಂತರವಾಗಿ ಬದಲಾವಣೆ ಹೊಂದುತ್ತಾ ಮುಂದೆಸಾಗುತ್ತಿರುವುದರಿಂದ ಇದಕ್ಕೆ ಬೇಕಾದ ಮೌಲ್ಯಗಳನ್ನು ಇಂದೇ ನಿರ್ಧಾರ ಮಾಡಲು ಸಾಧ್ಯವಾಗುವುದಿಲ್ಲ. ಆದ್ದರಿಂದ ಮಗುವು ಪ್ರಸ್ತುತ ಸಮಾಜದೊಡನೆ ಹೊಂದಿಕೊಂಡು ಹೋಗಲು ಅವಶ್ಯಕವಾಗಿ ಬೇಕಾದ ಶಕ್ತಿಸಾಮರ್ಥ್ಯಗಳಿಗೆ ಬೆಳವಣಿಗೆಯ ಗುರಿಯನ್ನು ಶಿಕ್ಷಣಹೊಂದಿರಬೇಕು. ಇದರ ಜೊತೆಗೆ ತನ್ನ ಬಾಳು ಹೆಚ್ಚು ಹೆಚ್ಚು ಅರ್ಥಪೂರ್ಣವಾಗಿರಲು ಹಾಗೂ ಸಮೃದ್ಧಿಯಿಂದ ಕೂಡಿರಲು ಪ್ರಸ್ತುತ ಮೌಲ್ಯಗಳಲ್ಲಿ ಸೂಕ್ತ ಮಾರ್ಪಾಟು ಮಾಡಿಕೊಳ್ಳುವ ಶಕ್ತಿಯನ್ನು ಬೆಳೆಸಿಕೊಳ್ಳಬೇಕು. ಅವಶ್ಯಕವಿದ್ದಲ್ಲಿ ನೂತನ ಮೌಲ್ಯಗಳನ್ನು ಕಂಡುಕೊಳ್ಳ-ಬೇಕಾದ ಶಕ್ತಿ ಸಾಮಾರ್ಥ್ಯಗಳ ಬೆಳವಣಿಗೆಯನ್ನು ಶಿಕ್ಷಣ ಸಾಧಿಸಬೇಕು. ಆದ್ದರಿಂದ ಶಿಕ್ಷಣದ ಅಂತಿಮ ಗುರಿ ಎಂದರೆ ಬೆಳವಣಿಗೆ ಹೆಚ್ಚಿನ ಬೆಳವಣಿಗೆ ಇನ್ನೂ ಹೆಚ್ಚಿನ ಬೆಳವಣಿಗೆ, ಇದೇ ಶಿಕ್ಷಣದ ಗುರಿ ಆಗಿರಬೇಕು. ಯಾವ ರೀತಿಯ ಬೆಳವಣಿಗೆ ಎಷ್ಟರ ಮಟ್ಟಿನಬೆಳವಣಿಗೆ ? ಯಾವ ದಿಶೆಯ ಬೆಳವಣಿಗೆ ? ಎಂಬದನ್ನು ಶಿಕ್ಷಣಪಡೆಯುತ್ತಾ, ಪಡೆಯುತ್ತಾ ಮುಂದೆ ಸಾಗಿದಂತೆಲ್ಲಾ ಕಂಡುಕೊಳ್ಳ ಬೇಕಾಗುವುದು.

## ಸಾಮಾಜಿಕ ದಕ್ಷತೆಯ ಗುರಿ

ವ್ಯಕ್ತಿಯಲ್ಲಿ ಸಾಮಾಜಿಕ ದಕ್ಷತೆಯನ್ನು ಬೆಳೆಸುವ ಗುರಿಯನ್ನು ಶಿಕ್ಷಣ ಹೊಂದಿರಬೇಕು ಸಾಮಾಜಿಕ ದಕ್ಷತೆ ಎಂಬುದು ಈ ಕೆಳಕಂಡ ಲಕ್ಷಣಗಳನ್ನು ಒಳಗೊಂಡಿರುತ್ತದೆ.

1) ಉತ್ತಮ ಆರೋಗ್ಯ.
2) ನಾಗರೀಕ ಸಾಮರ್ಥ್ಯ.
3) ಔದ್ಯೋಗಿಕ ದಕ್ಷತೆ.
4) ವಿವೇಚನಾಯುಕ್ತ ನೈತಿಕತೆ.

ಉತ್ತಮ ಆರೋಗ್ಯ ಹೊಂದಿರುವುದು ಎಂದರೆ, ಜೀವನ ನಮಗೆ ಒದಗಿಸಿ ಕೊಡಬಹುದಾದ ಸುಖ ಸಂತೋಷಗಳನ್ನು ಅನುಭವಿಸಬಲ್ಲ ಸಾಮಾನ್ಯ ಮನೋಸ್ಥಿತಿ ವಾಸ್ತವಿಕತೆಗೆ ಸರಿಹೊಂದಬಹುದಾದ ಮಾನಸಿಕ ಹೊಂದಾಣಿಕೆ ಪರಿಸ್ಥಿತಿಗಳನ್ನು ನಿಭಾಯಿಸಿಕೊಂಡು ಹೋಗಬಲ್ಲ ಸ್ಥಿತಿ. ಇದಕ್ಕೆ ಅವಶ್ಯವಾದ ಭೌತಿಕ ಬೌದ್ಧಿಕ ಹಾಗೂ ಭಾವನಾತ್ಮಕ ಶಕ್ತಿಸಾಮರ್ಥ್ಯಗಳ ಬೆಳವಣಿಗೆ ಹೊಂದಿರುವುದು. ಇದು ಅರೋಗ್ಯವಂತನ ಲಕ್ಷಣ ಇದನ್ನು ಶಿಕ್ಷಣ ಬಳೆಸಬೇಕು.

ನಾಗರೀಕ ಸಾಮರ್ಥ್ಯ ಎಂದರೆ ದೇಶದ ರಾಜಕೀಯ ಜೀವನದಲ್ಲಿ ಕ್ರಿಯಾತ್ಮಕವಾಗಿ ಭಾಗವಹಿಸಬಲ್ಲ ಸಾಮರ್ಥ್ಯ ರಾಜಕೀಯ ಹಾಗೂ ಸಾಮಾಜಿಕ ಕಟ್ಟುಪಾಡುಗಳನ್ನು ಮತ್ತು ಕಾನೂನುಗಳನ್ನು ರಚಿಸುವಲ್ಲಿ ಪಾಲಿಸುವುದರಲ್ಲಿ ಹಾಗು ಮುಕ್ತಾ ಯುಕ್ತತೆಗಳನ್ನು ಮೌಲ್ಯಮಾಪನ ಮಾಡುವುದರಲ್ಲಿ ಕ್ರಿಯಾತ್ಮಕವಾಗಿ ಪಾಲುಗೊಳ್ಳುವ ಶಕ್ತಿ ಸಾಮರ್ಥ್ಯವನ್ನು ಹೊಂದಿರುವುದು. ಇದು ನಾಗರೀಕ ಸಾಮರ್ಥ್ಯದ ಅರ್ಥ. ಇದನ್ನು ಶಿಕ್ಷಣ ಬೆಳಸಬೇಕು.

ಔದ್ಯೋಗಿಕ ದಕ್ಷತೆ ಎಂದರೆ ತನ್ನ ಜೀವನಾವಶ್ಯಕ ವಸ್ತುಗಳಾದ ಆಹಾರ, ಉಡುಪು, ವಸತಿ, ಮನರಂಜನೆಗೆ ಬೇಕಾದ ಪರಿಕರಗಳು ಮುಂತಾದುವನ್ನು ಗಳಿಸಲು ಪರಾವಲಂಬಿಯಾಗದೆ ಯಾವುದಾದರೊಂದು ಉದ್ಯೋಗವನ್ನು ಕೈಗೊಂಡಿರುವ ಈ ಉದ್ಯೋಗದ ನಿರ್ವಹಣೆಯಿಂದ ತನಗೆ ಮತ್ತು ಸಮಾಜಕ್ಕೆ ಉಪಯುಕ್ತವಾಗಿರುವುದು. ಆರ್ಥಿಕ-ಸ್ವಾವಲಂಬನೆ ಗಳಿಸುವುದು ಇದಕ್ಕೆ ಬೇಕಾದಶಕ್ತಿ, ಸಾಮರ್ಥ್ಯ ಜ್ಞಾನ ಮತ್ತು ತರಬೇತಿಗಳನ್ನು ಹೊಂದಿರುವುದು. ಇದೇ ಔದ್ಯೋಗಿಕ ದಕ್ಷತೆಯ ಲಕ್ಷಣ ಇದನ್ನು ಶಿಕ್ಷಣ ಬೆಳೆಸಬೇಕು.

ಯಾಂತ್ರಿಕವಾಗಿ ವಿವೇಚನಾರಹಿತವಾಗಿ ಬೆಳೆಸಿಕೊಂಡ ನೈತಿಕ ಬೆಳವಣಿಗೆಯು ವ್ಯಕ್ತಿ ಹಾಗೂ ಸಮಾಜಕ್ಕೆ ಉಪಯುಕ್ತವಲ್ಲ.

ನಾವು ಬೆಳಸಿಕೊಂಡ ನೈತಿಕೆಯು ವಿವೇಚನೆಯಿಂದ ಕೂಡಿರಬೇಕು. ನೀತಿ ಪಾಲನೆಯು ಇತರರ ಭಯ ಅಥವಾ ಬಾಹು ಒತ್ತಡಗಳಿಂದ ದೂರವಾಗಿರಬೇಕು. ಸ್ವಯಿಚ್ಛೆಯಿಂದ ನೀತಿಪಾಲನೆ ಯಾಗಬೇಕು. ತನ್ನ ಮತ್ತು ಸಾಮಾಜಿಕ ಒಳಿತಿನಿಂದ ಪ್ರೇರಿತವಾದ ನೀತಿ ಪಾಲನೆಯೇ ನಿಜವಾದ ನೈತಿಕ ಬೆಳವಣಿಗೆ. ಇದರಿಂದ ತನ್ನ ಹಾಗೂ ಸಮಾಜದ ಒಳಿತನ್ನು ಕಾಣಲು ಸಾಧ್ಯ. ಇದೇ ವಿವೇಚನಾಯುಕ್ತ ನೈತಿಕತೆಯ ಲಕ್ಷಣ, ಇದನ್ನು ಶಿಕ್ಷಣ ಬೆಳೆಸಬೇಕು.

ಈ ಗುಣಗಳುಳ್ಳ ವ್ಯಕ್ತಿಯನ್ನು ನಾವು ಸಾಮಾಜಿಕ ದಕ್ಷತೆಯುಳ್ಳ ವ್ಯಕ್ತಿ ಎನ್ನುವೆವು. ಇದಕ್ಕೆ ಅವಶ್ಯವಾದ ಜ್ಞಾನ, ಶಕ್ತಿ, ಸಾಮರ್ಥ್ಯ, ಕೌಶಲ್ಯ ತರಬೇತಿ ಹಾಗೂ, ಮನೋಭಾವಗಳ ಬೆಳವಣಿಗೆಯೇ ಶಿಕ್ಷಣದ ಗುರಿ. ಇದನ್ನು ಸಾಮಾಜಿಕ ದಕ್ಷತೆಯ ಗುರಿ ಎನ್ನುತ್ತೇವೆ.

## ಪಠ್ಯಕ್ರಮ

ಡ್ಯೂಯಿಯ ಪ್ರಕಾರ ಪಠ್ಯಕ್ರಮ ವೆಂಬುದು ಮಗುವಿನ ನಡೆನುಡಿಗಳನ್ನು ರೂಪಿಸುವ ಮತ್ತು ನಿರ್ಧರಿಸುವ ಶಾಲೆಯ ಒಂದು ಸಮಗ್ರ ಕಾರ್ಯಕ್ರಮ. ಪಠ್ಯ ಕ್ರಮವು, ಶಿಶುಕೇಂದ್ರೀಕೃತ ವಾಗಿರಬೇಕು. ಅಂದರೆ ಮಗುವಿನ ಅವಶ್ಯಕತೆ ಆಸಕ್ತಿ ಶಕ್ತಿ ಸಾಮರ್ಥ್ಯ ಹಾಗೂ ಮನೋಭಾವಗಳಿಗೆ ಸರಿಹೊಂದುವಂತಿರುವುದು. ಇದು ಮುನ್ನಡೆಯು, ಸಾಮಾಜಿಕ ಹಿತಗಳ ಸಾಧನೆಯ, ಕಡೆಗೆ ಸಾಗುವಂತಿರಬೇಕು. ಪಠ್ಯಕ್ರಮದಲ್ಲಿ ಜೀವನಾನುಭವ ನೀಡಬಲ್ಲ ಜೀವನಸಮಸ್ಯೆಗಳಿದ್ದು ಸಾಮಾಜಿಕ ಅವಶ್ಯಕತೆಗಳು ಪ್ರತಿಫಲಿತವಾಗಿರಬೇಕು. ತಾನು ಪ್ರತಿಪಾದಿಸಿದ ಶಿಕ್ಷಣದ ಗುರಿಗಳನ್ನು ಈಡೇರಿಸುವ ಸಾಧನೆ ಯಾಗಿರಬೇಕು. ಅಂದರೆ ಮಗು ಮತ್ತು ಪಠ್ಯಕ್ರಮಗಳು ಒಂದೇ ರೇಖೆಯ ಎರಡು ಬಿಂದುಗಳಂತಿದ್ದು, ಇವೆರೆಡರ ಮಧ್ಯೆ ಸಾಮಾಜಿಕ ಮಾಧ್ಯಮವೇ ಸಂಪರ್ಕ ಸೇತುವೆಯಾಗಿರ ಬೇಕು. ಇವರು ಪ್ರತಿಪಾದಿಸಿದ ಪಠ್ಯ ಕ್ರಮವು ಈ ಕೆಳಕಂಡ ಹಂತಗಳಿಂದ ಕೂಡಿದೆ.

### ಮೊದಲನೆ ಹಂತದ ಶಿಕ್ಷಣ (4 ರಿಂದ 8 ವರ್ಷದ ಮಕ್ಕಳಿಗೆ)

ವ್ಯಕ್ತಿಗತ ಮತ್ತು ಸಾಮಾಜಿಕ ಸಂಬಂಧಗಳ ನೇರ ಪರಿಚಯ, ಇದಕ್ಕೆ ಸಂಬಂಧಿಸಿನ ವಿಷಯಾಭ್ಯಾಸ ಮತ್ತು ಚಟುವಟಿಕೆಗಳು, ಸರಳವಾಗಿ ಓದುವ ಬರೆಯುವ ಮತ್ತು ಲೆಕ್ಕಮಾಡುವ ಕೌಶಲ್ಯ ಬೆಳವಣಿಗೆ, ಗೃಹ ಕೆಲಸ ಮತ್ತು ವ್ಯವಸಾಯ ಕೆಲಸಗಳಿಗೆ ಸಂಬಂಧಿಸಿದ ಸರಳವಾದ ವ್ಯಕ್ತಿ ತರಬೇತಿ, ಇವುಗಳಿಗೆ ಸಂಬಂಧಿಸಿದ ಶಿಕ್ಷಣವನ್ನು ಈ ವರ್ಗದ ಮಕ್ಕಳಿಗೆ ನೀಡಬಹುದಾಗಿದೆ.

### ಎರಡನೆಯ ಹಂತದ ಶಿಕ್ಷಣ (8 ರಿಂದ 12 ವರ್ಷದ ಮಕ್ಕಳಿಗೆ)

ಸಾಮಾಜಿಕ ಸ್ಥಿತಿ ಮತ್ತು ಗತಿಗಳನ್ನು ಅರ್ಥಮಾಡಿಕೊಳ್ಳಲು ಕುತೂಹಲ ವೆಂಬ ಹುಟ್ಟುಗುಣದ ದಾಹವನ್ನು ತೃಪ್ತಿಪಡಿಸಿಕೊಳ್ಳಲು, ಮತ್ತು ಸಂಕೀರ್ಣವಾದ ಸಾಮಾಜಿಕ ಪ್ರಕ್ರಿಯೆಗಳಲ್ಲಿ ಭಾಗಿಯಾಗಲು ಸಹಾಯ ವಾಗಬಹುದಾದ, ಸಮಾಜ ಶಾಸ್ತ್ರ ಮತ್ತು ಪ್ರಯೋಗಾತ್ಮಕ ವಿಜ್ಞಾನ ವಿಷಯಗಳ ಶಿಕ್ಷಣವನ್ನು ಈ ವರ್ಗದ ಮಕ್ಕಳಿಗೆ ನೀಡಬಹುದಾಗಿದೆ.

### ಮೂರನೆ ಹಂತದ ಶಿಕ್ಷಣ (12 ವರ್ಷದಿಂದ ಮೇಲ್ಪಟ್ಟ ಮಕ್ಕಳಿಗೆ)

ಈ ಹಂತದ ಮಕ್ಕಳಿಗೆ ಸಮಸ್ಯೆಗಳನ್ನು ಗ್ರಹಿಸಬಲ್ಲ, ಪರಿಹರಿಸ ಬಲ್ಲ ಮತ್ತು ಪರಿಹಾರೋಪಾಯಗಳನ್ನು ಕಂಡುಕೊಳ್ಳಬಲ್ಲ ಶಕ್ತಿ ಬಂದಿರುತ್ತದೆ ಆದ್ದರಿಂದ ವ್ಯವಸಾಯ, ಉತ್ಪಾದನೆ, ಬಳಕೆ, ಸಾಗಣೆ, ವಿತರಣೆ, ಮತ್ತು ವಿನಿಮಯ ವಹಿವಾಟು, ಇವುಗಳಿಗೆ ಸಂಬಂಧಿಸಿದ ವಿಷಯಗಳ ಮತ್ತು ಸಮಸ್ಯೆಗಳ ಶಿಕ್ಷಣವನ್ನು ಈ ವರ್ಗದ ವ್ಯಕ್ತಿಗಳಿಗೆ ನೀಡಬಹುದಾಗಿದೆ.

## ಡ್ಯೂಯಿ ಪ್ರತಿಪಾದಿಸಿದ ಬೋಧನಾ ವಿಧಾನಗಳು.

ಹರ್ಬಾರ್ಟನು ಪ್ರತಿಪಾದಿಸಿದ ಬೋಧನಾಹಂತದ ಪಂಚ ಸೋಪಾನಗಳಾದಪೂರ್ವ-ಸಿದ್ಧತೆ, ನಿವೇದನೆ, ಹೋಲಿಕೆ, ಸಾಮಾನ್ಯೀಕರಣ, ಮತ್ತು ಅನ್ವಯಿ-ಕೆಗಳು

ಇದರಬದಲು ಇವರು ಈ ಕೆಳಕಂಡ ಹಂತಗಳನ್ನು ಬೋಧನೆಯು ಒಳಗೊಂಡಿರ ಬೇಕೆಂದು ಪ್ರತಿ ಪಾದಿಸಿದ್ದಾರೆ.

ಚಟುವಟಿಕೆ

| | |
|---|---|
| 1 ಚಟುವಟಿಕೆ | 2 ಸಮಸ್ಯೆಯ ಅರಿವು. |
| 3 ದತ್ತಾಂಶಗಳ ಅರಿವು | 4 ಅವಲೋಕನ |
| 5 ಊಹಾಪರಿಹಾರ ಕಂಡುಕೊಳ್ಳುವುದು | 6 ಪರಿಹಾರ ಪರೀಕ್ಷೆ. |

ಶಾಲೆಯೇ ಒಂದು ನಮೂನೆಯ ಸಮಾಜ ವೆಂಬಂತೆ ವಾತಾವರಣ ಸೃಷ್ಟಿಸಿ, ಸ್ವೈಜ ಸನ್ನಿವೇಶಗಳನ್ನು ಮಕ್ಕಳಿಗೆ ಒದಗಿಸಿ ಕೊಡುವುದರ ಮೂಲಕ ಜೀವನ ಚಟು ವಟಿಕೆ ಮತ್ತು ಜೀವನಾನುಭವಗಳನ್ನು ಬೋಧನೆಯು ಒದಗಿಸಿ ಕೊಡಬೇಕು.

ಬೋಧನೆಯಲ್ಲಿ ವಿದ್ಯಾರ್ಥಿಗಳ ಸ್ವಯಂಕಲಿಕೆಗೆ ಹೆಚ್ಚಿನ ಅವಕಾಶ ವಿರಬೇಕು ಯೋಜನಾ ಪದ್ಧತಿ, ಮತ್ತು ಸಮಸ್ಯೆ ಪರಿಹಾರ ವಿಧಾನಗಳನ್ನು ಬೋಧನೆಯಲ್ಲಿ ಅಳವಡಿಸಿ ಕೊಂಡಿರಬೇಕು.

ಮಗುವಿನ ಚಿಂತನೆ ಮತ್ತು ಅಭಿವ್ಯಕ್ತಿಗಳಿಗೆ ಸಾಕಷ್ಟು ಸ್ವಾತಂತ್ರ್ಯವುಳ್ಳ ಬೋಧನಾ ತಂತ್ರ ಪಾಲಿಸಬೇಕು ಶಿಕ್ಷಕರೇ ಎಲ್ಲವನ್ನು ಮಕ್ಕಳಿಗೆ ಕಲಿಸುವ ಬದಲು, ಸಾಧ್ಯವಾದಷ್ಟು ಮಕ್ಕಳೇ ಸ್ವತಂತ್ರವಾಗಿ ಕಲಿಯಲು ಬೇಕಾದ ಬೋಧನಾ ತಂತ್ರ-ಗಳನ್ನು ಶಿಕ್ಷಕರು ಅಳವಡಿಸಿ ಕೊಳ್ಳಬೇಕು.

ಈ ರೀತಿಯಾದ ಶಿಕ್ಷಣದ ಕಲ್ಪನೆಯ ನ್ನು ಜಾನ್‌ಡ್ಯೂಯಿಯು ನಮಗೆ ಬಿಟ್ಟು ಹೋಗಿದ್ದಾರೆ. ಇವರು ಪ್ರತಿಪಾದಿಸಿದ ಶಿಕ್ಷಣದಲ್ಲಿನ, ವಾಸ್ತವಿಕತೆ, ವ್ಯವಹಾರಿಕತೆ ಮತ್ತು ಪ್ರಯೋಗಾತ್ಮಕ ಕಲ್ಪನೆಗಳು, "ಬೆಳವಣಿಗೆಯೇ ಶಿಕ್ಷಣದಗುರಿಯು" ವಿಶೇಷಾರ್ಥದ ಕಲ್ಪನೆಗಳು ಇಂದಿನ ಶಿಕ್ಷಣಕ್ಕೆ ದಾರಿದೀಪವಾಗಿರಲಿ ಎಂದು ಆಶಿಸೋಣ.

---

# ಕ್ಷೇತ್ರವಾರ್ತೆ

ಮನುಷ್ಯ ಮನುಷ್ಯನಾಗಿ ಬದುಕುವ ಕಲೆಯನ್ನು ತೋರಿಸಿಕೊಟ್ಟವರು ಬಸವಣ್ಣ. ಜೀವನಸಮುದ್ಧಕ್ಕೂ ಕಾಯಕದ ಮಹತ್ವವನ್ನು ಆಚರಿಸಿ ಸಕಲ ಸಮಸ್ಯೆಗಳಿಗೂ ಮಾರ್ಗತೋರಿಸಿದವರು ಬಸವಾದಿ ಶರಣರು ಎಂಬುದಾಗಿ ಆಶೀರ್ವಚನ ನೀಡಿದರು ಪರಮ ಪೂಜ್ಯ ಶ್ರೀ ಶ್ರೀ ಗಳು ದಿನಾಂಕ 14-1-90ರಂದು ಶ್ರೀ ಮಠದಲ್ಲಿ ಬಸವ ಜಯಂತಿ ವಾರ್ಷಿಕ ಸಮಾರೋಪ ಸಮಾರಂಭದಲ್ಲಿ ಭಾಗವಹಿಸಿದ ಶುಭ ಸಂದರ್ಭದಲ್ಲಿ.

ಚಕ್ರವರ್ತಿಯಾದವನೂ ಬೆದರುವಂತೆ ನೈತಿಕ ಶಕ್ತಿಯಿಂದ ಬಾಳಿ ಬೆಳಗಿದ ಬಸವಣ್ಣನವರು ಜ್ಯೋತಿಶಕ್ತಿಯಾಗಿ ಪ್ರಭಾಪುಂಜರಾದರು. ಅವರಿಗೆ ಆದರ್ಶಗಳು, ಮೌಲ್ಯಗಳು ಜೀವನ ಸಾಧ್ಯವಾಗುತ್ತವೆ. ಇಡೀ ದೇಶವೇ ಅವರಿದ್ದ ಕಡೆಗೆ ಬರುವಂತೆ ಅವರು ಬದುಕಿತೋರಿದರು. ಅವರದು ಬೆಳೆಯುತ್ತ ಹೋದ ಬೆಳವಣಿಗೆಯ ಬೆಳಕಿನ ಬದುಕು ನಿರಂತರವಾದ ಸವಾಲುಗಳನ್ನು ಎದುರಿಸುತ್ತಲೇ ಮುನ್ನಡೆದ ಮಹಾಚೇತನ ಅದು. ವ್ಯಕ್ತಿ ತನ್ನ ದಾರಿಯನ್ನು ತಾನೇನಡೆಯಬೇಕು ಎಂಬ ನಿತ್ಯಸತ್ಯವನ್ನು ಗೌರವಿಸಿದರು ಬಸವಣ್ಣ. ಪರಮಪೂಜ್ಯ ಶ್ರೀ ಶ್ರೀಗಳವರು ತಮ್ಮ ಜೋಳಿಗೆಯ ಸಂಸ್ಕೃತಿಯಿಂದ ಸಮಾಜವನ್ನಿಂದು ಸಾಂಸ್ಕೃತಿಕ ಶ್ರೀಮಂತರನ್ನಾಗಿ ಮಾಡುತ್ತಿದ್ದಾರೆ. ಹೊಳೆಗಳು ಸಮುದ್ರ ಸೇರಿ ಶಾಂತವಾಗುವಂತೆ ಶ್ರೀ ಶ್ರೀಗಳವರ ಸಾನಿಧ್ಯದಲ್ಲಿ ಭಿನ್ನ ಭಿನ್ನ ಅಭಿರುಚಿಯ ಮನೋಧರ್ಮದ ಮನಸ್ಸುಗಳೆಲ್ಲ ಶಾಂತಿ ಸುಖವನ್ನನುಭವಿಸುವಂತಾಗಿರುವುದು ಸಮಾಜದಪುಣ್ಯ. ಸಂಕ್ರಮಣದ ಪುಣ್ಯದಿನದಂದು ಒಳ್ಳೆಯದಕ್ಕೆಲ್ಲ ನಮ್ಮ ಹೃದಯ ತೆರೆಯುವಂತಾಗಲಿ ಎಂಬುದಾಗಿ ಅಧ್ಯಕ್ಷತೆ ವಹಿಸಿದ್ದ ಕನ್ನಡಸಾಹಿತ್ಯ ಪರಿಷತ್ತಿನ ಪ್ರಾ|| ಜಿ. ಎಸ್. ಸಿದ್ಧಲಿಂಗಯ್ಯನವರು ನುಡಿದರು.

ವೀರಶೈವ ಧರ್ಮ ನಿಂತಿರುವುದೇ ಭಕ್ತಿಯ ಮೇಲೆ ಎಂದು ಉಪನ್ಯಾಸ ಪ್ರಾರಂಭಿಸಿದ ಕರ್ನಾಟಕ ವಿಶ್ವವಿದ್ಯಾಲಯದ ಪ್ರಧ್ಯಾಪಕರಾದ ಡಾ|| ಬಿ. ವ್ಹಿ. ಮಲ್ಲಾಪುರ ಅವರು ವರ್ಣಾಶ್ರಮ ಪದ್ಧತಿಯಿಂದ ರಾಷ್ಟ್ರೀಯಪ್ರಜ್ಞೆ ಬೆಳೆಯದಂತಾದುದು ದೇಶದ ದೌರ್ಭಾಗ್ಯ. ಸ್ಥಾವರದಿಂದ ಜಂಗಮಕ್ಕೆ ನಡೆದಾಗ ಕ್ರಾಂತಿ ಅನಿವಾರ್ಯವಾಗುತ್ತದೆ. ಬುದ್ಧ ಕೇವಲ ವೈಚಾರಿಕ ಕ್ರಾಂತಿ ಮಾಡಿದ. ಆದರೆ ಶರಣರು ಕಾಯಕದ ಮೂಲಕ ಸಮಗ್ರಕ್ರಾಂತಿ ಮಾಡಿದರು. ಶರಣರು ಮಾಡಿದ ಕ್ರಾಂತಿ 'ಮಾಡುವೆನೆಂಬುದು ಮನದಲ್ಲಿ ಹೊಳೆಯದೆ' ನಡೆದ ಪೂರ್ಣಕ್ರಾಂತಿ ವ್ಯಕ್ತಿ.ಸಮಾಜಗಳ ಪುರೋಭಿವೃದ್ಧಿ ಸಾಧಿಸಿದ ಸಂಕ್ರಾಂತಿ. ಸ್ಥಾವರಗೊಂಡಿದ್ದ ಸಮಾಜದ ವೈದಿಕ ಮನೋಧರ್ಮವನ್ನು ವಿರೋಧಿಸಿದರೇಹೊರತ ಬಸವಣ್ಣ ವೈದಿಕರನ್ನಲ್ಲ ಎಂದು ಸ್ಪಷ್ಟಪಡಿಸಿದರು. ಕಾಯಕ ಮತ್ತು ಕ್ರಾಂತಿ ಎಂಬ ವಿಷಯವನ್ನು ಕುರಿತು ಮಲ್ಲಾಪುರ ಅವರು ನೀಡಿದ ಉಪನ್ಯಾಸ ವಿಚಾರ ಪೂರ್ಣವಾಗಿ ಮೂಡಿ ಬಂದಿತು.

ಬಸವಣ್ಣ ಅನ್ವೇಷಕ ಹಾಗೆಯೇ ಹೊಸದರ ನಿರ್ಮಾಪಕ. ಸವಾಲುಗಳನ್ನು ಎದುರಿಸಿದ ಧೀಮಂತ ವ್ಯಕ್ತಿತ್ವ ಅವರದು ಅಂತರಂಗ ಬಹಿರಂಗ ಶೋಧಕರಾದ ಬಸವಣ್ಣ ಕಾಯಕದ ಒಡಲಲ್ಲಿ ದಾಸೋಹವನ್ನು ನಿಕ್ಷೇಪಗೊಳಿಸಿದ. ಆ ದಾಸೋಹ ದಿಂದ ಗುರು ಲಿಂಗ ಜಂಗಮವನ್ನು ಕಾಣುವ ಮಾರ್ಗತೋರಿ ಕ್ರಾಂತಿದೀಪ ಕ್ರಾಂತಿ ಪುರುಷನಾಗಿ ಅರಳಿದ್ದು ಆಶ್ಚರ್ಯವೇನಲ್ಲ ಎಂಬುದಾಗಿ "ಬಸವಣ್ಣನವರು ಮತ್ತು ಕೆಲವು ವಿಚಾರಗಳು" ಎಂಬ ವಿಷಯವಾಗಿ ಉಪನ್ಯಾಸ ನೀಡಿದರು ಮೈಸೂರು ವಿಶ್ವವಿದ್ಯಾನಿಲಯದ ಪ್ರಾಧ್ಯಾಪಕರಾದ ಡಾ|| ಎನ್.ಎಸ್. ತಾರಾನಾಥ್‌ರವರು.

ದಿ|| 14-1-1990 ರಂದು ಗ್ರಾಮಾಂತರ ಬಸವಜಯಂತಿ ಅಂಗವಾಗಿ ಪ್ರೊ|| ಸಂ.ಶಿ. ಭೂಸನೂರುಮಠರಿಂದ ರಚಿತವಾದ 'ಭವ್ಯಮಾನವ'ದ ವಿಚಾರ ಸಂಕಿರಣವನ್ನು ಏರ್ಪಡಿಸಲಾಗಿದ್ದ ಗೋಷ್ಠಿಯಲ್ಲಿ ಮಾತನಾಡುತ್ತ ಶ್ರೀ ಮಠದ ಕಿರಿಯಸ್ವಾಮಿಗಳಾದ ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗಸ್ವಾಮಿಗಳವರು ದೇಶಕಾಲಾತೀತವಾದ ಮಹಾಕಾವ್ಯ ಭವ್ಯಮಾನವ. ಅಲ್ಪದಿಂದ ಭವ್ಯದೆಡೆಗೆ, ಸಾಂತದಿಂದ ಅನಂತದೆಡೆಗೆ, ಕ್ರೌರ್ಯದಿಂದ ಕಾರುಣ್ಯದೆಡೆಗೆ ಹರಿದಿರುವ ಅನುಭಾವಿಕ ದಾರ್ಶನಿಕ ಕಾವ್ಯ ಭವ್ಯಮಾನವ ಎಂಬುದಾಗಿ ನುಡಿದರು.

ಅಕ್ಕಮಹಾದೇವಿಯ ಜೀವನ ಕಥೆಯನ್ನಾಧರಿಸಿ ಒಡಮೂಡಿದ ಕಾವ್ಯ "ಭವ್ಯಮಾನವ" ಲೋಕದೆಲ್ಲ ಮೌಲ್ಯಗಳನ್ನು ಗೌರವಿಸುತ್ತ ನಡೆದ ಮಾನವೀಯ ಔನತ್ಯವನ್ನು ಬಿತ್ತರಿಸುವ ಮಹಾಕಾವ್ಯ ಎಂಬುದಾಗಿ ಶ್ರೀ ಟಿ.ಆರ್. ಮಹಾದೇವಯ್ಯ ನವರು ಉಪನ್ಯಾಸ ಮಾಡಿದರು.

ಭವ್ಯಮಾನವದ ನಾಟಕೀಯ ಗುಣವನ್ನು ಕುರಿತು ಪ್ರಸ್ತಾಪಿಸಿದ ಕರ್ನಾಟಕ ವಿಶ್ವವಿದ್ಯಾಲಯದ ಪ್ರಾಧ್ಯಾಪಕರಾದ ಡಾ|| ವೀರಣ್ಣ ರಾಜೂರ ವಿಶಿಷ್ಟವಾದ ಶೈಲಿಯಲ್ಲಿ ಮಾತನಾಡಿದ್ದು ಆಕರ್ಷಕವಾಗಿತ್ತು.

ಈ ಸಂದರ್ಭದಲ್ಲಿ ಸನ್ಮಾನಿತರಾದ ಪ್ರೊ|| ಸಂ.ಶಿ. ಭೂಸನೂರು ಮಠರವರು ಮಾತನಾಡುತ್ತಾ, ಪರಮ ಪೂಜ್ಯರು ನಡೆಸಿರುವ ಮಹಾಮಣಿಹವನ್ನು ನೋಡಿದಾಗ "ಭವ್ಯಮಾನವ"ದ ಅರ್ಥವಂತಿಕೆ ಇನ್ನಷ್ಟು ದೃಢವಾಗುತ್ತದೆ ಪೂಜ್ಯರು ನಡೆಸಿರುವ ಎಲ್ಲ ಚಟುವಟಿಕೆಗಳು ನಿಜಕ್ಕೂ ಭವ್ಯವಾಗಿವೆ, ಪೂಜ್ಯವಾಗಿವೆ ಎಂದು ಮನಸಾರೆ ನುಡಿದರು.

ದಿ|| 13-1-1990 ರಂದು ಪರಮ ಪೂಜ್ಯ ಶಿವಯೋಗಿ ಉದ್ದಾನೇಶ್ವರರ 49 ನೆ ಪುಣ್ಯಾರಾಧನಾ ಸಂದರ್ಭದಲ್ಲಿ ಮಾತನಾಡಿದ ಬೆಂಗಳೂರು ವಿಶ್ವವಿದ್ಯಾಲ-ಯದ ಕನ್ನಡ ವಿಭಾಗದ ಪ್ರಾಧ್ಯಾಪಕರಾದ ಡಾ||ಎಸ್. ವಿದ್ಯಾಶಂಕರ್‌ರವರು

ರಾಮಕೃಷ್ಣ ಪರಮಹಂಸರನ್ನು ಕಂಡಂತಾಗುತ್ತದೆ ಉದ್ದಾನಶಿವಯೋಗಿಗಳವರ ಜೀವನಕಥೆಯನ್ನು ಅಧ್ಯಯನ ಮಾಡುವಾಗ ಎನ್ನುತ್ತ ವಿವೇಕಾನಂದರು ಹೇಗೆ ಪರಮಹಂಸರ ಶಿಷ್ಯರಾಗಿ ಬಂದರೋ ಹಾಗೆ ಪೂಜ್ಯ ಶ್ರೀ ಶ್ರೀ ಡಾ|| ಶಿವಕುಮಾರ ಸ್ವಾಮಿಗಳು ಪೂಜ್ಯ ಉದ್ದಾನ ಶಿವಯೋಗಿಗಳಿಗೆ ಶಿಷ್ಯರಾಗಿ ಬಂದರು, ನಾಡಿಗೆ ಸಮಾಜಕ್ಕೆ ಬೆಳಕು ನೀಡುತ್ತ ನಡೆದಿದ್ದಾರೆ ಎಂದು ನುಡಿದರು.

ಬಸವಣ್ಣನವರು ಇತಿಹಾಸದಲ್ಲಿ ಹೊಸದಿಕ್ಕನ್ನು ಗುರುತಿಸಿ, ಹೊಸಯುಗವನ್ನು ನಿರ್ಮಿಸಿ, ಯುಗಪ್ರವರ್ತಕ ಶಕ್ತಿಯಾಗಿ ಬಂದ ಮಹಾನುಭಾವರು ಎಂಬುದಾಗಿ ಡಾ|| ಎಚ್. ತಿಪ್ಪೇರುದ್ರಸ್ವಾಮಿಗಳಿಂಥ ರಚಿತವಾದ "ಕರ್ತಾರನಕಮ್ಮಟ" ಕಾದಂಬರಿಯನ್ನು—ಶ್ರೀ ಮಠದ ಪ್ರಕಟಣೆಯನ್ನು-ಬಿಡುಗಡೆಮಾಡುತ್ತ ನುಡಿದರು ಮಾಜಿ ಸಚಿವರಾದ ಶ್ರೀ ಎಂ. ಪಿ. ಪ್ರಕಾಶ್ ರವರು.

ಸಂಕೀರ್ಣ ವ್ಯಕ್ತಿತ್ವ ಬಸವಣ್ಣನವರದು, ಧರ್ಮದೊಂದಿಗೆ ರಾಜಕೀಯವನ್ನು ಬೆರೆಸಿಕೊಂಡು ಹೋರಾಡುತ್ತಲೆ ಶೋಷಣೆಯನ್ನು ಪ್ರತಿಭಟಿಸುತ್ತ ಮುಂದುವರಿದ ಅಂತಃಕರಣ ಪುಣ್ಯ ಜೀವಿ ಅವರು ಎಂಬುದಾಗಿ ಡಾ। ಎಚ್. ತಿಪ್ಪೇರುದ್ರ ಸ್ವಾಮಿ-.ಗಳು ಮಾತನಾಡಿದರು.

ಇದೇ ಸಂದರ್ಭದಲ್ಲಿ ಡಾ|| ಎಚ್ ತಿಪ್ಪೇರುದ್ರ ಸ್ವಾಮಿಗಳನ್ನು ಸನ್ಮಾನಿಸಲಾಯಿತು.

ದಿ|| 13-1-90 ರಂದು ಹಳೆಯ ವಿದ್ಯಾರ್ಥಿಸಂಘದ ಮಹಾಧಿವೇಶನ ನಡೆದ ಸಂದರ್ಭದಲ್ಲಿ ಪರಮಪೂಜ್ಯರ ತಪೋನಿಷ್ಠ ಸೇವಾ ಜೀವನದ ಅರುವತ್ತು ವರ್ಷಗಳ ಸ್ಮರಣಾರ್ಥವಾಗಿ ವಜ್ರ ಮಹೋತ್ಸವ ಆಚರಿಸಬೇಕೆಂದು ಸರ್ವಾನುಮತದಿಂದ ನಿರ್ಣಯಿಸಲಾಯಿತು.

ದಿ. 10-1-90 ರಂದು ಶ್ರೀ ಮಠದ ನಿವಾಸ ಶಿಕ್ಷಣ ಸಂಸ್ಥೆಗಳ ಸಂಯುಕ್ತ ವಿದ್ಯಾರ್ಥಿ ಸಂಘದ ಮುಕ್ತಾಯ ಸಮಾರಂಭದಲ್ಲಿ ಮುಖ್ಯ ಅತಿಥಿಗಳಾಗಿ ಮಾತ-ನಾಡಿದ ರಾಜ್ಯದ ಲೋಕೋಪಯೋಗಿ ಸಚಿವರಾದ ಶ್ರೀ ಜಿ. ಪುಟ್ಟಸ್ವಾಮಿಗೌಡರು ಪರಮಪೂಜ್ಯ ಶ್ರೀ ಶ್ರೀ ಗಳವರು ತಮ್ಮ ತಪಸ್ಸು, ಸೇವೆಗಳ ಮೂಲಕ ನಾಲ್ಕು ಕೋಟಿ ಕನ್ನಡಿಗರಿಗೆ ಗೌರವ ತಂದಿದ್ದಾರೆ ಎಂದು ಹೇಳುತ್ತ ಶ್ರೀಮಠ ನಡೆಸಿಕೊಂಡು ಬಂದಿರುವ ತ್ರಿವಿಧ ದಾಸೋಹವನ್ನು ಮುಕ್ತ ಕಂಠದಿಂದ ಶ್ಲಾಘಿಸಿದರು.

ಲೋಕಸಭಾ ಸದಸ್ಯರಾದ ಶ್ರೀ ಜಿ. ಎಸ್. ಬಸವರಾಜು ರವರು ಮಾತನಾಡುತ್ತ ಶಿಕ್ಷಕ ಬಂಧುಗಳು ಆದರ್ಶ ಚಾರಿತ್ರ್ಯವನ್ನುಳ್ಳವರಾಗಿ ಮಕ್ಕಳಲ್ಲಿ ನೈತಿಕಸಂಪತ್ತು ಬೆಳೆಯುವಂತೆ ಶ್ರಮಿಸಬೇಕೆಂದರು.

ವಿಧಾನ ಸಭಾಸದಸ್ಯರಾದ ಶ್ರೀ ಷಫಿಅಹಮ್ಮದ್ ರವರು ಮಾತನಾಡುತ್ತ ವಿದ್ಯಾಸಂಸ್ಥೆಗಳನ್ನು ನಡೆಸುವುದು ತುಂಬಾ ಜವಾಬ್ದಾರಿಯುತವಾದುದು, ಪರಮ ಪೂಜ್ಯ ಶ್ರೀ ಶ್ರೀ ಗಳು ಬೃಹತ್ತಾಗಿ ಶಿಕ್ಷಣ ಕ್ಷೇತ್ರದಲ್ಲಿ ಸಲ್ಲಿಸುತ್ತಿರುವ ಸೇವೆಯಿಂದ ರಾಜ್ಯ ಮತ್ತು ರಾಷ್ಟ್ರಗಳು ಸಂಪದ್ಭರಿತವಾಗುತ್ತಿವೆ ಎಂದು ನುಡಿದರು.

ಶಾಸಕರಾದ ಶ್ರೀ ನಾರಾಯಣಸ್ವಾಮಿಯವರು ವಿಜ್ಞಾನ ಮತ್ತು ಕಲಾ ಪ್ರದರ್ಶನವನ್ನು ಉದ್ಘಾಟಿಸಿ ಮಾತನಾಡುತ್ತಾ, ಇಷ್ಟೊಂದು ಬೃಹತ್ ಸೇವೆ ನಡೆಸಿದ ಶ್ರೀ ಮಠಕ್ಕೆ ವೈದ್ಯಕೀಯ ಕಾಲೇಜನ್ನು ಸರ್ಕಾರ ಕೊಡಬೇಕು ಎಂಬುದಾಗಿ ಸಮಾರಂಭದಲ್ಲಿ ಭಾಗಿಗಳಾಗಿದ್ದ ಸಚಿವ ಮಾನ್ಯ ಶ್ರೀ ಪುಟ್ಟಸ್ವಾಮಿಗೌಡರಿಗೆ ವಿನಂತಿಸಿಕೊಂಡರು.

ಪ್ರಾಮಾಣಿಕತೆ, ಪರಿಶುದ್ಧ ಜೀವನ ಇಂದು ಕಣ್ಮರೆಯಾಗುತ್ತಿದೆ, ರಾಜಕಾರಣವಂತೂ ಭ್ರಷ್ಟತೆಯಿಂದ ತುಂಬಿಹೋಗಿದೆ, ಇದು ಶೋಚನೀಯ ವೆಂದು ಪರಮಪೂಜ್ಯ ಶ್ರೀ ಶ್ರೀ ಗಳವರು ಆಶೀರ್ವಚನ ನೀಡಿದರು.

ದಿ. 23-1-90 ರಂದು ಶ್ರೀ ಮಠದಲ್ಲಿ ಸಂಯುಕ್ತ ವಿದ್ಯಾರ್ಥಿಸಂಘದ ಆಶ್ರಯದಲ್ಲಿ ಅಂತರ ಶಾಲಾ ಕಾಲೇಜುಗಳ ಚರ್ಚಾಸ್ಪರ್ಧೆ ನಡೆದು, ಅಂದೇ ಸಂಜೆ ಬಹುಮಾನವಿತರಣಾ ಸಮಾರಂಭವೂ ಜರುಗಿತು. ಸಮಾರಂಭದ ಅಧ್ಯಕ್ಷತೆಯನ್ನು ಶ್ರೀಸಿದ್ಧಗಂಗಾ ಶಿಕ್ಷಣ ಕಾಲೇಜಿನ ಪ್ರಾಚಾರ್ಯರಾದ ಶ್ರೀ ಎಂ. ವಿ ಸಿದ್ಧಲಿಂಗ ಮೂರ್ತಿಗಳು ವಹಿಸಿ ಮಾತನಾಡುತ್ತ, ನಿಜವಾದ ಪ್ರಾಯೋಗಿಕ ಶಿಕ್ಷಣ ಶ್ರೀ ಮಠದಲ್ಲಿ ನಡೆಯುತ್ತಿದೆ. ಮಕ್ಕಳು ಒಳ್ಳೆಯ ವಾತಾವರಣದಲ್ಲಿ ಬೆಳೆಯುತ್ತಿದ್ದಾರೆ, ಶಿಕ್ಷಕರ ಆಸಕ್ತಿ ಸಕ್ರಿಯವಾಗಿ ಒದಗಿ ಬಂದರೆ ಇನಿಷ್ಟು ಪರಮಪೂಜ್ಯರ ಆದರ್ಶ ಜೀವನಕ್ಕೆ ಮೆರುಗುಕೊಟ್ಟಂತಾಗುತ್ತದೆ ಎಂದು ನುಡಿದರು. ಕರ್ನಾಟಕ ರಾಜ್ಯರಸ್ತೆ ಸಾರಿಗೆ ಸಂಸ್ಥೆಯ ತುಮಕೂರು ಡಿಪೋದ ಮೇನೆಜರ್‌ರಾದ ಶ್ರೀ ವಸಂತಕುಮಾರ್ ಬಹುಮಾನವಿತರಣೆ ಮಾಡಿದರು.

ದಿ. 24-1-90 ರಂದು ಕೃಷಿ ಮತ್ತು ಕೈಗಾರಿಕಾ ವಸ್ತುಪ್ರದರ್ಶನದ ಸಾಂಸ್ಕೃತಿಕ ಸಮಿತಿ ಸಭೆ ಸೇರಿ 1990ರ ಫೆಬ್ರವರಿ ಜಾತ್ರಾಸಂದರ್ಭದಲ್ಲಿ ನಡೆಯುವವಸ್ತುಪ್ರದರ್ಶನದಲ್ಲಿ ಕಾರ್ಯಕ್ರಮ ನೀಡಲು ಅಪೇಕ್ಷಿಸಿ ಬಂದ ಅಭ್ಯರ್ಥನ ಪತ್ರಗಳನ್ನು ಪರಿಷ್ಕರಿಸಿ ಆಯ್ಕೆಮಾಡಲಾಯಿತು. ಸಭೆಯ ಅಧ್ಯಕ್ಷತೆಯನ್ನು ಶ್ರೀ ಬಿ. ಗಂಗಾಧರಯ್ಯನವರು ವಹಿಸಿದ್ದರು

ದಿ. 26-1-90 ರಂದು ನಡೆದ ಗಣರಾಜ್ಯೋತ್ಸವ ಸಮಾರಂಭದಲ್ಲಿ ವಿಧಾನಸಭಾ ಸದಸ್ಯರಾದ ಶ್ರೀ. ಸಿ, ವೀರಭದ್ರಯ್ಯನವರು ಅತಿಥಿಗಳಾಗಿ ಆಗಮಿಸಿ ಶ್ರೀ ಮಠದ ಸೇವಾ ಕಾರ್ಯಗಳನ್ನು ಪ್ರಶಂಸಿದರು

## ಪರಮ ಪೂಜ್ಯ ಶ್ರೀ ಶ್ರೀಗಳವರ
## 1990ರ ಜನವರಿ ತಿಂಗಳ ಕೆಲವು ಕಾರ್ಯಕ್ರಮಗಳು

14-1-90 ಶಿವಗಂಗಾ ಜಾತ್ರಾ ಸಮಾರಂಭದ ಅಧ್ಯಕ್ಷತೆ

14-1-90 ಶ್ರೀ ಮಠದಲ್ಲಿ ಬಸವಜಯಂತಿ ಸಮಾರೋಪ ಸಮಾರಂಭದಲ್ಲಿ ಅಧ್ಯಕ್ಷ

15-1-90 ತುಮಕೂರು ತಾಲ್ಲೂಕು, ಊರುಕೆರೆ ಸಮಾರಂಭದಲ್ಲಿ ಅಧ್ಯಕ್ಷತೆ

17-1-90 ಬಂಡೇಮಠದ ಪಕ್ಕದಲ್ಲಿರುವ ರಂಗೇನಹಳ್ಳಿಯಲ್ಲಿ ಶ್ರೀ ಪರಮಶಿವಯ್ಯನವರ ಮನೆಯಲ್ಲಿ ಪೂಜೆ

18-1-90 ತುಮಕೂರು ವೈಶ್ಯಬ್ಯಾಂಕ್ ಕಾರ್ಯಕ್ರಮದ ಉದ್ಘಾಟನೆ

18-1-90 ದೊಡ್ಡಬಳ್ಳಾಪುರ ತಾಲ್ಲೂಕು, ಅಂಬಲಗೆರೆ ಸದಾಶಿವಯ್ಯನವರ ಮನೆಯಲ್ಲಿ ಪೂಜೆ

19-1-90 ಬೆಂಗಳೂರು ಜಿಲ್ಲೆ ಸೂಲಿಬೆಲೆಯಲ್ಲಿ ಸಮಾರಂಭದ ಅಧ್ಯಕ್ಷತೆ

19-1-90 ತುಮಕೂರು ಶ್ರೀ ಸಿದ್ಧಗಂಗಾಮಹಿಳಾ ಕಾಲೇಜಿನ ಪ್ರಾಂಶುಪಾಲರಾದ ಶ್ರೀ ಕೆ. ಹೆಚ್. ಪರಮಶಿವಯ್ಯನವರ ಮನೆಯಲ್ಲಿ ಪೂಜೆ

20-1-90 ಚಿಕ್ಕಹಳ್ಳಿಯಲ್ಲಿ ಎಸ್. ಶಿವಕುಮಾರ್ S I.T. ಇವರ ಮನೆಯಲ್ಲಿ ಪೂಜ

21-1-90 ತುಮಕೂರು ತಾಲ್ಲೂಕು ಹೆಬ್ಬೂರು ಹೋಬಳಿ, ಬಳ್ಳಗೆರೆ ಗ್ರಾಮ ಲಿಂ॥ ಬೋರೇಗೌಡರ ಮನೆಯಲ್ಲಿ ಹೆಬ್ಬೂರು ಈಶ್ವರ ಸೇವಾ ಸಂಘದ ಆಶ್ರಯದಲ್ಲಿ ಗ್ರಾಮಾಂತರ ಬಸವಜಯಂತಿಯ ದಿವ್ಯನೇತೃತ

21-1-90 ಬಳ್ಳಗೆರೆ ಶ್ರೀ ಸಿದ್ಧಲಿಂಗಯ್ಯನವರ ಮನೆಯಲ್ಲಿ ಸಂಜೆ ಪೂಜೆ

22-1-90 ನೆಲಮಂಗಲ ತಾಲ್ಲೂಕು ತೋಟಗೆರೆ ಪ್ರೌಢಶಾಲಾ ವಾರ್ಷಿಕೋತ್ಸವ ದಿವ್ಯ ಅಧ್ಯಕ್ಷತೆ

27-1-90 ಪುರುಷನಹಳ್ಳಿ ಪಂಡಿತ ಶ್ರೀ ಸಿದ್ಧಗಂಗಯ್ಯನವರ ಮನೆಯಲ್ಲಿ ಪೂ

28-1-90 ಬೆಂಗಳೂರು ಮಾಮೂಲ್‌ಪೇಟೆ-ಶ್ರೀಮತಿ ಗೌರಮ್ಮನವರ ಮನೆಯಲ್ಲಿ ಪೂಜೆ

29-1-90 ಅಖಿಲ ಕರ್ನಾಟಕ ಶೈವ ಮಡಿವಾಳ ಮಹಾಜನಸಂಘ-ಬೆಂಗಳೂ ರಾಜಾಜಿನಗರ-ಸಮಾರಂಭದ ಅಧ್ಯಕ್ಷತೆ,

29-1-90 ಕಂಬಾಳುವಿನಲ್ಲಿ ಪೂಜೆ

30-1-90 ಮರಳಗುಂಟೆ-ಪ್ರಧಾನ ಶ್ರೀ ಗಂಗಣ್ಣನವರ ಮನೆಯಲ್ಲಿ ಪೂಜೆ

31-1-90 ಮಾಗಡಿ ತಾಲ್ಲೂಕು ಸಿರಗನಹಳ್ಳಿ-ಶ್ರೀ ಚಂದ್ರಪ್ಪನವರ ಮನೆಯಲ್ಲಿ

31-1-90 ತುಮಕೂರು-ಶ್ರೀ ಬಸವೇಶ್ವರ ಇಂಗ್ಲಿಷ್ ಶಾಲೆಯ ಸಮಾರಂಭ ದಿವ್ಯ ಅಧ್ಯಕ್ಷತೆ.

31-1-90 ದೊಡಬಳ್ಳಾಪುರ ತಾಲ್ಲೂಕು-ನಾಗಸಂದ್ರ ಶ್ರೀ ಮರಿಯಪ್ಪನವರ ಮನೆಯಲ್ಲಿ ಪೂಜೆ.

**ಹಳೆಯ ವಿದ್ಯಾರ್ಥಿ ಬಂಧುಗಳಲ್ಲಿ ಮನವಿ**

ನಿಮ್ಮ ಹೆಮ್ಮೆಯ ಪತ್ರಿಕೆಯಾದ 'ಸಿದ್ಧಗಂಗಾ' 25 ವರ್ಷ ನಿರಂತರ ನಡೆದು ಬಂದುದಕ್ಕಾಗಿ ಕರ್ನಾಟಕ ಪತ್ರಿಕಾ ಅಕಾಡೆಮಿಯಿಂದ ಪುರಸ್ಕಾರ ಪ್ರಶಸ್ತಿ ಪಡೆದಿದೆ ಎಂಬುದನ್ನು ತಿಳಿಸಲು ಸಂತೋಷಿಸುತ್ತ, ಶ್ರೀ ಮಠದಲ್ಲಿ ನೀವಿದ್ದ ಅವಧಿಯಲ್ಲಿ ಪಡೆದ ಅನುಭವಗಳನ್ನು ಲೇಖನರೂಪದಲ್ಲಿ ಬರೆದು ಕಳುಹಿಸಬೇಕಾಗಿ ವಿನಂತ್ತಿಸುತ್ತೇವೆ. "ಅನುಭವವು ಸಿಹಿಯಲ್ಲ ಆದರನೆನಪೇ-ಸವಿಯು." ಅಲ್ಲವೆ? ಹಾಗಾದರೆ ಬರೆದು ಕಳುಹಿಸಿ.

## ಶ್ರದ್ಧಾಂಜಲಿ

ಅಧ್ಯಾಪಕ, ಸ್ವಾತಂತ್ರ್ಯಯೋಧ, ಸಾಹಿತಿ, ಚಿಂತಕ, ಸಾಮಾಜಿಕ ಕಾರ್ಯಕರ್ತ, ಪತ್ರಕರ್ತ, ಸಂಘಟನಾಕಾರ, ಆಡಳಿತಗಾರ ಗಾಂಧಿವಾದದ ಪ್ರತಿಷ್ಠಿತವಕ್ತಾರರೆಂದು ಪ್ರಸಿದ್ಧಿತರಾಗಿದ್ದ ರಂಗನಾಥ ರಾಮಚಂದ್ರ ದಿವಾಕರರು ದಿ. 15-1-90 ರಂದು ನಿಧನರಾದುದನ್ನು ತಿಳಿದು "ಸಿದ್ಧಗಂಗಾ ಶೋಕಿಸುತ್ತದೆ. ವಚನಶಾಸ್ತ್ರರಹಸ್ಯ ವನ್ನು ಬರೆದು ಮಹೋಪಕಾರ ಮಾಡಿದ ದಿವಂಗತರ ಅಗಲಿಕೆಯಿಂದ ರಾಷ್ಟ್ರದ ಒಬ್ಬ ದೇಶಭಕ್ತನನ್ನು ಕಳೆದುಕೊಂಡು ನಷ್ಟವನ್ನನುಭವಿಸುವಂತಾಗಿದೆ. ದಿವಂಗತರ ಆತ್ಮಕ್ಕೆ ಬಸವಾದಿ ಶರಣರು ಶಾಂತಿಯನ್ನುಂಟುಮಾಡಲೆಂದು, ಅವರ ಕುಟುಂಬ ವರ್ಗದವರಿಗೆ ದಿವಂಗತರ ಅಗಲಿಕೆಯ ನೋವನ್ನು ಸಹಿಸುವಶಕ್ತಿಯನ್ನು ನೀಡಲೆಂದೂ ಪರಮ ಪೂಜ್ಯ ಶ್ರೀ ಶ್ರೀ ಗಳಿಗೂ ದಿವಂಗತ ದಿವಾಕರರಿಗೂ ನಿಕಟ ವಿಶ್ವಾಸವಿದ್ದು-ದನ್ನು ಈ ಸಂದರ್ಭದಲ್ಲಿ ಸ್ಮರಿಸುತ್ತ ದುಃಖದಲ್ಲಿ 'ಸಿದ್ಧಗಂಗಾ' ಸಹಭಾಗಿಯಾಗಿ ಶ್ರದ್ಧಾಂಜಲಿಯನ್ನರ್ಪಿಸುತ್ತದೆ.

# ಇಷ್ಟಲಿಂಗಧಾರಣ ಸಂಸ್ಕಾರ

ಡಾ॥ ವಿಲ್ಯಂ ಮೂಡ್ರ್ತ, ಅಧ್ಯಕ್ಷರು, ಕನ್ನಡಅಧ್ಯಯನಪೀಠ, ಕರ್ನಾಟಕವಿಶ್ವವಿದ್ಯಾಲಯ ಧಾರವಾಡ

ಲಿಂಗಾಯತಗರಾಗ ಬೇಕಾದರೆ ಲಿಂಗ ಆಯತವಾದರೆ ಸಾಲದು, ಸ್ವಾಯತ-ವಾಗಿರಬೇಕು. ಇದರಿಂದಾಗಿ ಅವರು ಶಿವನ ವೀರರು ವೀರಶೈವರು. ಇಲ್ಲೆ ಮತ್ತು ಈಗ ಶಿವ ಸಾಮ್ರಾಜ್ಯ ಸ್ಥಾಪನೆಯಾಗಬೇಕೆಂಬುದೇ ಅವರ ಜೀವನದ ಸಾಮಾಜಿಕ-ಗುರಿ. ಶರಣ ಸಮಾಜವೇ ಶಿವ ಸಾಮ್ರಾಜ್ಯ. ಶಿವೇಚ್ಛೆಯ ಮೇರೆಗೆ ಸಮಾಜ ಸಮಾಜಮುಖಿಯಾಗಿ ಸರ್ವಮಾಸನರಾಗಿ, ಲಿಂಗ, ಜಾತಿ, ಒಳಜಾತಿ ಭೇದವಿಲ್ಲದೆ, ದಾಸೋಹ ಭಾವದಿಂದ ಕಾಯಕವೇ ಪೂಜೆ ಎಂಬ ಮನೋಭಾವದಿಂದ ಕಾರ್ಯ ತತ್ಪರರಾಗಿ ತುಂಬು ಜೀವನವನ್ನು ಬಾಳುವಂತಹ ಪೂರ್ಣ ವ್ಯಕ್ತಿಗಳೇ ಶಿವಶರಣರು, ಇವರಿಗೆ ತಮ್ಮ ಅಸ್ತಿತ್ವದ ಸ್ಥಲವೇ ದೇವರು; ಕಾಯವೇ ಆತನ ದೇಗುಲ; ಕಾಯಕವೇ ಪೂಜೆ.

ಶಿವ ಮತ್ತು ಶರಣರಲ್ಲಿ ಎರಡಿಲ್ಲ (ಅ-ದ್ವೈತ). ಅವರು ಒಂದೇಇರವಿನ ಎರಡು ಸ್ಥರಗಳು. ಶಿವನೇ ಅಂತರಂಗ ಶರಣ ಆತನ ಬಹಿರಂಗ. ಈ ಎರಡು ಸ್ಥರಗಳ ಸಾಮರಸ್ಯವೇ ಲಿಂಗಾಯತರ ಮುಕ್ತಿ. ಈ ಮುಕ್ತಿಯನ್ನು ಈಗಲೇ ಇಲ್ಲಿಯೇ ಪಡೆಯುವ ಆತುರ ಅವರದು.

ಮುಕ್ತಿ ಸಾಧನೆಯಲ್ಲಿ ಅರ್ಥಾತ್ ಆಧ್ಯಾತ್ಮಿಕ ವಿಕಾಸದಲ್ಲಿ ಕಾಣದ "ಪರವಸ್ತು" ವನ್ನು ಅನುಭಾವಿಸಲು ಕೆಲವೊಂದು ಕಾಣುವ "ವಸ್ತು"ವಸ್ತುಗಳನ್ನು ಧಾರ್ಮಿಕ ಸಂಕೇತ ಸಂಸ್ಕಾರಗಳನ್ನಾಗಿ ಲಿಂಗಾಯತ ಧರ್ಮ ತನ್ನ ಭಕ್ತರಿಗೆ ಕಲ್ಪಿಸಿ ಕೊಟ್ಟಿದೆ. (ಉದಾ: ಇಷ್ಟಲಿಂಗಧಾರಣ, ಇಷ್ಟಲಿಂಗದೀಕ್ಷೆ, ವಿವಾಹ, ಅಂತ್ಯೇಷ್ಟಿ) ಇವುಗಳಲ್ಲಿ ಇಷ್ಟಲಿಂಗಧಾರಣ ಮೂಲಭೂತವಾದುದು.